# ಬಾಳ ಕನಸು

ಕವನ ಸಂಗ್ರಹ

ಕೃಷ್ಣಮೂರ್ತಿ ಪುರಾಣಿಕ

ಅಕ್ಟೋಬರ ೧೯೬೭

# ಮುನ್ನುಡಿ

**ಅಣ್ಣಾ !**

ನೀನು ಅಂದು ಬರೆದ ಕವನಗಳು ಇಂದು ಬೆಳಕಿಗೆ ಬರುವವೆಂದು ಕೇಳಿ ಸಂತೋಷವಾಯಿತು. ಬಡತನದ ಬವಣೆಗೆ ಸಿಲುಕಿ, ನಿನ್ನ ಕಾವ್ಯದ ಮುಗುಳು ಕಮರದಿದ್ದುದು ಆಶ್ಚರ್ಯ. ತಾಯ್ನುಡಿಯ ಸೇವೆಗಾಗಿ, ನೀನು ಪಟ್ಟ ಅನಂತ ಶ್ರಮಗಳ ಫಲವಿದು ಈ ಫಲವು ನಿನ್ನ ನಾಡಿನ ಸೇವೆ ಆ ಸೇವೆಯೇ ನಿನ್ನ ಭವ್ಯ ಭವಿಷ್ಯತ್ತಿನ ಅಡಿಗಲ್ಲಾಗಲೆಂದು ಆಶಿಸುತ್ತೇನೆ. ಈ ವೇಳೆಯಲ್ಲಿಯೆ ಆಧುನಿಕ ಗೀತೆಗಳನ್ನು ಓದಿದಾಗಿನ ನನ್ನ ಅನುಭವಗಳನ್ನು ಇಲ್ಲಿ ನಿರೂಪಿಸಲು ಪ್ರಯತ್ನಿಸುತ್ತೇನೆ.

(ಕವಿಯು ಕನಸುಣಿ. ಅವನುಂಡ ಕನಸುಗಳೇ ಇಂದು ಜೀವನದ ವಿದ್ರೂಪತೆಯನ್ನು ತಿದ್ದಬೇಕಾಗಿದೆ. ಆದರೆ ಆ ಕನಸು ಕಟ್ಟುವ ಹೃದಯ ಮಾತ್ರ ಚಿನ್ನದಂತಿರಬೇಕು. ಆಂದರೇನೆ, ಆ ಹೊಂಗನಸುಗಳು ಆದರ್ಶಗಳ ಆಭಾಸವಾಗದೆ, ನಿತ್ಯ ಜೀವನದ ಅಭಯವನ್ನು ಪಡೆಯುತ್ತವೆ ಈ ಅಮೃತಸಿದ್ಧಿಗೆ ಬಲವಾದ ಸಾಧನೆ ಅಗತ್ಯ. ಜೀವನವನ್ನು ಮಥಿಸಿದಾಗ ಹೊರಡುವ ಹಾಲಾಹಲವನ್ನುಂಡು, ಅಮೃತವನ್ನು ನೀಡುವ ಸಂಸ್ಕೃತಿ ಅವನಲ್ಲಿ ಬಲಗೊಳ್ಳಬೇಕು. ಆ ಸಂಸ್ಕೃತಿಯು ಲೋಕಾನುಭವದ ಬೆಳೆ, ವಾತಾವರಣದ ಕೂಸು, ಅಭ್ಯಾಸದ ಫಲ. ಈ ಸಂಪತ್ತನ್ನು ಪಡೆದ ಕವಿಯ ಕನಸು ತನ್ನ ಇತ್ಯರ್ಥವನ್ನು ಸಾಧಿಸಲು ಅರ್ಹ. ಆತ್ಮಾನಂದ ಪಡೆಯಲು ಸಹಾಯಕಾರಿ )

ಇಂದಿನ ಗೀತೆಗಳಲ್ಲಿ ಇದರ ಅಭಾವವಿದೆ. ಜೀವನದ ವಿಶಾಲತೆ, ವೈವಿಧ್ಯವನ್ನರಿಯದೆ, ಸಾಮಾಜಿಕ ಜೀವನದ ಹೃದಯವನ್ನರಿಯದೆ, ಬರೆಯಬೇಕೆಂಬ ಹಟ, ಮತ್ತು ಹೆಮ್ಮೆಗಳ ಶಬ್ದಜಾಲಗಳಿಷ್ಟೇ ಮೂಡಿಬಂದಿವೆ. ಸಂಖ್ಯೆ ಬೆಳೆದಿದೆ. ಭಾವ–ಸಂಪತ್ತು

ಕುಗ್ಗಿದೆ ಕವಿಯ ದೃಷ್ಟಿಯಲ್ಲಿಯೇ ಅವನ ಸೃಷ್ಟಿ ಪ್ರತಿಭೆಯಿದ್ದು ದಿವ್ಯದೃಷ್ಟಿಯಿಂದ ಜಟಿಲ ಜೀವನದ ಪರಿಪೂರ್ಣ ಪರಿಜ್ಞಾನ ಕವಿಗೆ ಅವಶ್ಯ. ಇಂದಿನ ಕವಿಯು ಯಾಂತ್ರಿಕ ಜೀವನದ ಕೈಗೊಂಬೆಯಾಗಿದ್ದಾನೆ. ಅವನ ಬುದ್ಧಿ ಬೆಳೆದಿದೆ; ಹೃದಯ ಬುದ್ಧಿಗೆ ಶರಣಾಗಿದೆ ಅಂತಃಕರಣದಲ್ಲಿ ಕೊಳೆ ಬಂದಿದೆ. ಇದರಿಂದ ಅವನ ಸಂಸ್ಕೃತಿ, ಸದೋಷವಾಗಿದೆ ಕಾವ್ಯವು ಹೃದಯದ ರಸಗಂಗೆ ಅದು ಪರಿಶುದ್ಧವಾದಷ್ಟು, ಪಡೆದುಕೊಂಡ ಆನಂದವು, ನಿತ್ಯಜೀವನದಲ್ಲಿ ನೂತನ ಆಶೆ, ಆಕಾಂಕ್ಷೆಗಳನ್ನು ಚಿಗುರಿಸುತ್ತದೆ.

ಆಭಾಸದ ಬಲವಿಲ್ಲದ ಗೀತೆಗಳು ಶಬ್ದಸಂಪತ್ತಿನ ಅಭಾವದಿಂದ ಕ್ಲಿಷ್ಟತೆಯನ್ನು ಪಡೆದುಕೊಂಡಿವೆ. ಪಾಮರನಿಗಾಗಿ ಬರೆದ ಅವನ ಗೀತೆಗಳು, ಪಂಡಿತರಿಗೂ ಮುಗಿಲುಮಲ್ಲಿಗೆಗಳಾಗಿವೆ. ಭಾವಗಳು ನುಡಿಗಳಲ್ಲಿ ಹುದುಗಿಕೊಂಡಾಗ, ಅವನ ಹಾಡಿನ ಫಲವೇನು? ಹೊಸ ನಾಡು ಹುಟ್ಟುವಾಗ, ಹೊಸ ಸಂಸ್ಕೃತಿಯ ಅರಿವೂ ಜನಕ್ಕೆ ಬೇಕು. ಆ ಅರಿವು ಕಾವ್ಯ-ಶಕ್ತಿಯ ಆನಂದದ ಕಳೆ. ಅದನ್ನು ಪಡೆಯದ ಜನಕ್ಕೆ ಎಲ್ಲವೂ ಆಭಾಸವಲ್ಲವೇ? ಈ ಮಾತು ಬರೆಯುವಾಗ್ಗೆ 'ಪ್ರಗತಿಶೀಲರ, ವಧಕದ ನೆನವಾಗುತ್ತದೆ. ಅವರ ಶೀಲವು, ಸ್ವಾಗತಾರ್ಹವಾವಿದೆ ಹದಿನೆಂಟು ವರ್ಣನೆಗಳ ಸಂಕೋಲಿಯಿಂದ ಬಿಡುಗಡೆ ಹೊಂದಿದ ಕಾವ್ಯವು, ಮತ್ತೆ ಶಾಸ್ತ್ರಕೌತುಕಕ್ಕೆ ಎಲ್ಲಿ ಆಮಂತ್ರಣವನ್ನೀಯುವುದೋ ಎಂಬ ಭಯಮಾತ್ರವಿದೆ. ಕವಿಯ ಕಾವ್ಯ ಮಲ್ಲಿಗೆಯಂತೆ ಅರಳಲಿ!

ಇಂದಿನ ರಸಿಕ ಓದುಗರ ದೃಷ್ಟಿಯಲ್ಲಿ ಪರಿವರ್ತನೆ ಆವಶ್ಯವಾಗಿ ಬೇಕಾಗಿದೆ. ಮಲ್ಲಿಗೆಯ ಮಾರ್ದವತೆ, ಕೂಸಿನ ಸರಳತೆ ಅವರ ಹೃದಯಕ್ಕೆ ಬೇಕು ಅಂದರೆ ಆ ಹೃದಯದಲ್ಲಿ ಕಾವ್ಯದ ಅಮೃತರಸವು ಇಳಿಯುವುದು. ಅದನ್ನು ಅನುಭವಿಸಿದ ಓದುಗರು ನಾಡಿನ ಹೊಸ ಸಂಸ್ಕೃತಿಯನ್ನು ಕಟ್ಟಿ, ನೂತನ ಜೀವನದ ಪ್ರತಿನಿಧಿಗಳಾಗುವರು ಅಂತಾಗಲೆಂದು ನಾನು ಹಾರೈಸುವೆ.

(ನನ್ನ ಅನುಭವದ ತಕ್ಕಡಿಯಲ್ಲಿ, ನಿನ್ನ ಕಾವ್ಯವನ್ನು ತೂಗಿ ನೋಡಿದೆ 'ಅವತಾರವು' ಐತಿಹಾಸಿಕ ಸತ್ಯತೆಯ ಹಿರಿಬಲದಿಂದ ಹೊಸ ಜೀವನದ ಅವತಾರಕ್ಕಾಗಿ ಗರ್ಜಿಸುತ್ತಿದೆ) ಅಂದಿನ ನಿನ್ನ ಗರ್ಜನೆ, ಇಂದು ಫಲಕಾರಿಯಾಗುವಂತೆ ತೋರಹತ್ತಿದೆ ('ಗಿರಿಯ ವೆಂಕಟ' ಎಂಬಲ್ಲಿ ಮೂಡಿದ ನುರುಕ, ಧರ್ಮಿಷ್ಠರನ್ನು ಎಚ್ಚರಗೊಳಿಸುವಂತಿವೆ ಅನ್ಯಾಯ, ಅಧರ್ಮಗಳ ಕೊಳೆಯನ್ನು. ತೆಗೆದು ಹಾಕಲು, ಮತ್ತು ವೇದನೆಯಲ್ಲಿ ಸಮಾಜವು ಸಡಿಲವಾಗದೆ, ಆ ಮೋದವನ್ನು ಪಡೆದುಕೊಂಡು ಸತ್ಯ ಸಮಾಜವಾಗಿ ಬರಲೆಂಬ ಬೇರೆ ಬೇರೆ ಗೀತಗಳಲ್ಲಿ ಅಡಕವಾದ ಕಾವ್ಯವಾಣಿಯು ಎಲ್ಲಿಯೂ ಮಾರ್ದನಿಗೊಳ್ಳಲೆಂದು ಆಶಿಸುತ್ತೇನೆ)

ಹೆಚ್ಚಿಗೇನು? ಹಿರಿಯ ಸಾಹಿತಿಗಳೆಂಬವರು ಲೆಕ್ಕಣಿಕೆ ಹಿಡಿದಾಗ್ಗೆ, ನನ್ನ ಲೆಕ್ಕಣಿಕೆ ಎಷ್ಟೋ ಗೀತೆಗಳನ್ನು ಬರೆದಿತ್ತು. ಕೀರ್ತಿಗಾಗಿ ಬರೆಯದೆ, ನೀನು ನುಡಿಯ ಸೇವೆಗಾಗಿ ಬರೆದೆ. ಇಂದು ಆ ಸೇವೆಯೇ ನಾಡಿನ ಕೀರ್ತಿಯನ್ನು ಬರಯಲಿ!

ನಿನ್ನ ತಮ್ಮ
**ಶಂಕರ**

# ಅರಿಕೆ

ಕಳೆದ ಹತ್ತು-ಹನ್ನೆರಡು ವರುಷಗಳಲ್ಲಿ ಬರೆದ ಕವನಗಳಲ್ಲಿ ಕೆಲವನ್ನು ಆಯ್ದು ಈ ಪುಸ್ತಕದಲ್ಲಿ ಪ್ರಕಟಿಸುತ್ತಿದ್ದೇನೆ. ಕನ್ನಡ ಕಾವ್ಯರಸಿಕರ ಉದಾರ ಹೃದಯದ ಬೆಳಕಿನಲ್ಲಿ ಉಳಿದ ಕವನಗಳು ಕೂಡ ಬೇಗನೇ ಬೆಳಕು ಕಾಣಬಹುದೆಂಬ ಭರವಸೆ ಇಟ್ಟುಕೊಂಡಿದ್ದೇನೆ. ಕನ್ನಡದ ಕಾವ್ಯಸಂಪತ್ತು ಬೆಳೆಯಬೇಕಾದರೆ ಕೇವಲ ರಸಿಕ ಹೃದಯವಷ್ಟೇ ಸಾಲದು, ಅದರ ಜೊತೆಗೆ ಹೃದಯದ ಉದಾರ ಭಾವವೂ ಹಿಗ್ಗಬೇಕೆಂಬ ಮಾತನ್ನು ಹೇಳದಿರಲಾರೆ.

ನನ್ನ ಕವನ ಸಂಗ್ರಹವೊಂದು ಈ ಮೊದಲೆ ಪ್ರಕಟವಾಗಬೇಕಾಗಿತ್ತೆಂದು ನನ್ನ ಬಲ್ಲ ಗೆಳೆಯರೆಲ್ಲ ಆಗಾಗ ಎಚ್ಚರಿಸುತ್ತಿದ್ದರೂ ಪ್ರಕಟನೆಯ ಹೊಣೆಹೊರುವ ಪರಿಸ್ಥಿತಿ ಬರುವವರೆಗೆ ಅವರ ಮಾತಗಳನ್ನು ಮೊಲಕು ಹಾಕುತ್ತಲೇ ಇರುತ್ತಿದ್ದೆ. ಆರ್ಥಿಕ ಮುಗ್ಗಟ್ಟಿನ ಪರಿಸ್ಥಿತಿಯಲ್ಲಿ ಸುಮ್ಮನೆ ಪ್ರಕಟಿಸಿ ಮನಸ್ಸಿನ ನೆಮ್ಮದಿಯನ್ನು ಕಳೆದುಕೊಳ್ಳುವದಕ್ಕಿಂತ ಯೋಗ್ಯಕಾಲ ಬರುವವರೆಗೆ ತಡೆಯುವದೇ ಲೇಸೆಂದು 'ಕವನ ಸಂಗ್ರಹ'ದ ಪ್ರಕಟನೆಯನ್ನು ಮುಂದೂಡಿದೆ. ದೈವಾಯತ್ತವಾಗಿಯೋ ಎಂಬಂತೆ ನನಗೊಂದು ಸಹಾಯ ದೊರಕಿತು ಆ ಸಹಾಯದ ಫಲ ಈ 'ಬಾಳಕನಸು.'

ಕೌಜಲಗಿಯ ದೇಸಾಯಿಯವರಾದ ಶ್ರೀಮಂತ ಸರದಾರ ಬಿ ಜಿ ದೇಸಾಯಿಯವರು ಯೋಗ್ಯವಾದ ನೆರವನ್ನೀಯದಿದ್ದರೆ 'ಬಾಳಕನಸು' ಇನ್ನೂ ಕನಸಾಗಿಯೇ ಉಳಿಯುತ್ತಿತ್ತು. ಕೊಡುಗೈದೊರೆಗಳಾದ ಶ್ರೀಮಂತರು ಕೊಡಮಾಡಿದ ಈ ಸಹಾಯಕ್ಕಾಗಿ ಎಷ್ಟು ಕೊಂಡಾಡಿದರೂ ಕಡಿಮೆಯೆ ಅವರಿಗೆ ನಾನು ಅತ್ಯಂತ ಕೃತಜ್ಞನಾಗಿದ್ದೇನೆ

ಅಚ್ಚಿನ ಪ್ರತಿಗಳನ್ನು ಸಿದ್ಧಪಡಿಸುವಾಗ ಅಮೂಲ್ಯವಾದ ಸಲಹೆಗಳನ್ನಿತ್ತ ಕವಿಭೂಷಣ ಬೆಟಗೇರಿ ಕೃಷ್ಣಶರ್ಮರವರನ್ನು

ನೆನೆಯದಿರಲಾರೆ. ಈ ಸಂಗ್ರಹದಲ್ಲಿಯ ಅನೇಕ ಕವನಗಳು ಬೇರ ಬೇರೆ ಪತ್ರಿಕೆಗಳಲ್ಲಿ ಈ ಮೊದಲು ಪ್ರಕಟವಾಗಿವೆ. ಆ ಕವನಗಳನ್ನು ಪ್ರಕಟಿಸಿದ ಸಂಪಾದಕ ಮಹಾಶಯರಿಗೆಲ್ಲ ಈ ಮೂಲಕ ವಂದನೆ ಗಳನ್ನು ಸಲ್ಲಿಸುತ್ತೇನೆ.

ಪ್ರಕಟನೆಯ ಮೇಲ್ವಿಚಾರಣೆಯಲ್ಲಿ ಮೊದಲಿನಿಂದ ಕೊನೆಯ ವರೆಗೂ ಸಹಾಯ ಮಾಡಿದ ಗೆಳೆಯ ನೆಗಳೂರ ರಂಗನಾಥರಿಗೆ ಉಪಕೃತನಾಗಿರುವೆನೆಂದು ಹೇಳುವದು ಔಪಚಾರಿಕವಾಗಬಹುದೆಂದು ಅನ್ನಿಸಿದರೂ ನನ್ನ ಸಮಾಧಾನಕ್ಕಾಗಿಯಾದರೂ ನಾನು ಈ ಮಾತನ್ನು ಹೇಳಲೇಬೇಕು. ಅವರಿಗೆ ನಾನು ಬಹಳ ಋಣಿಯಾಗಿದ್ದೇನೆ

ಸಾಧನಕೇರಿಯ ಕಾವ್ಯಮಯ ವಾತಾವರಣದಲ್ಲಿ ಇದರಲ್ಲಿಯ ಕೆಲವು ಕವನಗಳು ರೂಪಗೊಂಡಿವೆ ಗೆಳೆಯ ನಾಡಿಗೇರ ರಘುನಾಥ ರಾಯರು ಸಾಧನಕೇರಿಯ ತಮ್ಮ ಮನೆಯಲ್ಲಿ ಈ ವಾತಾವರಣವನ್ನು ಕಲ್ಪಿಸಿಕೊಟ್ಟರು.

ರೇಖಾ ಚಿತ್ರವನ್ನು ಬರೆದುಕೊಟ್ಟ ಶ್ರಿ ಅರ್ಕಸಾಲಿಯವರಿಗೆ ಕೃತಜ್ಞನಾಗಿದ್ದೇನೆ.

ಕೊನೆಯದಾಗಿ ಅತ್ಯಲ್ಪ ಕಾಲದಲ್ಲಿಯೇ ಮುದ್ರಿಸಿಕೊಟ್ಟ 'ಸಾಧನಾ ಮುದ್ರಣಾಲಯ'ದ ಒಡೆಯರಾದ ಗೆಳೆಯ ಕುಲಕರ್ಣಿ ಶೇಷಗಿರಿರಾಯರಿಗೆ ನಾನು ತುಂಬಾ ಕೃತಜ್ಞನಾಗಿದ್ದೇನೆ.

ಸಾಹಿತ್ಯ-ಸೇವಾ-ಮಂದಿರ
ಗೋಕಾಕ
ಅಕ್ಟೋಬರ ೧೯೪೭

**ಕೃಷ್ಣಮೂರ್ತಿ ಪುರಾಣಿಕ**

# ಪರಿವಿಡಿ

# ಬಾಳ ಕನಸು

೧

ಅಂದು ಮನದ ರಂಗದಲ್ಲಿ
ಬಾಳ ಕನಸು ಮೂಡಿತು.
ಇಂದು ಭಾವ ಬಂಧದಲ್ಲಿ
ಜೀವ ಬೆರೆತು ನಿಂತಿತು

೨

ಎಳೆಯತನದ ಬಾಳಿನೆಳೆಯು
ಜೀವದುಸಿರ ಬೇಡಿತು
ಬಳಿವ ಬದುಕಿನೆದೆಯ ಸುಳಿಯು
ದಾರಿ ಯಾವುದೆಂದಿತು ?

೩

ಬಾಳಿನೆದೆಯ ನಾಡಿಯನ್ನು
ಭಾವದಲೆಯು ಮಿಡಿಯಿತು
ತಾಳಗೆಟ್ಟ ಹೃದಯವನ್ನು
ಮೇಳದಲ್ಲಿ ಹಿಡಿಯಿತು

೪

ಜೀವ ಭಾವರಾಗದಲ್ಲಿ
ತುಂಬಿ ತುಳುಕಿ ಸೂಸಿತು.
ಸಾವು ನೋವಿನಾಟದಲ್ಲಿ
ಹೃದಯ ತುಂಬಿ ಬಂದಿತು

೫

ವಿಧಿಯು ಕೈಯ ಸವರಿದಲ್ಲಿ
　　ಬಾಳು ಬಾಡಿ ಹೋಗಲು
ವಿಧಿಯ ಕ್ರೂರ ಕರ್ಮದಲ್ಲಿ
　　ಹೆಣ್ಣು ಬಾಳು ಸೋಲಲು

೬

ಹೀನದೀನರೆದೆಯ ಪಾಡು
　　ಗೋಳಿನುಸಿರ ಸೂಸಲು
ತಾಣಗೆಟ್ಟ ಜನದ ಬಾಳು
　　ತಣ್ಣಗಾಗಿ ನಿಲ್ಲಲು

೭

ದೇವನೆಂಬ ಹೆಸರಿನಲ್ಲಿ
　　ದೈತ್ಯ ನಾಡನಾಳಲು
ಕಾವನೆಂಬ ಕವಚದಲ್ಲಿ
　　ನಾಡಶಕ್ತಿ ಹೀರಲು

೮

ಬಾಳ ಕನಸು ಕಂಡಿತಂದು
　　ಭಾವ ರಾಗದುಂಬಲು
ಬಾಳು ಕನಸ ಕಟ್ಟಿತಂದು
　　ಭಾವ ರಾಣಿಗೆಸ್ನಲು

೯

ಎಳೆಯತನದ ಬಾಳ ಹೊಳೆಯು
　　ದಾರಿ ಕಾಣದೆಲ್ಲಿಗೊ!
ಏಳುಬೀಳುತೇರುತಿರಲು
　　ಭಾವ ರಾಣಿ ಬಂದಳೊ!

೧೦

ಭಾವ ರಾಣಿ ಬಂದರಂದು
ಕವನ ಮೈಯ ತಾಳದೆ ?
ಕವನ ಮೈಯ ಗೂಡಿದಂದು
ಜೀವದುಸಿರು ಸೂಸದೆ ?

೧೧

ಜೀವದುಸಿರೆ ಕವನದುಸಿರು
ಭಾವ ಬಂಧದಲ್ಲಿಯೆ
ಕವನದುಸಿರೆ ಸೊದೆಯ ಕುಸುರು
ಸೋತ ಜೀವಕಿಲ್ಲಿಯೆ

೧೨

ಜೀವ ಸೋತು ನಿಲ್ಲಬಹುದೆ
ಕವನ ಸಿದ್ಧಿಯಾಗಲು?
ಸಾವು ಬಾಳ ಗೆಲ್ಲಬಹುದೆ
ಕಾವ್ಯ ಸೃಷ್ಟಿಗೈಯಲು ?

## ಕವಿತಾ ಮಾತೆಗೆ

೧

ಆವ ದನಿಯಲಿ ಕೂಗಿ ಕರೆಯಲಿ
ನಿನ್ನ ಕವಿತಾದೇವಿಯೆ ?
ಭಾವ ಬನದಲಿ ನೆಟ್ಟ ಬೀಜವು
ಮೊಳೆತು ನಿಂತಿದೆ ತಾಯಿಯೆ;
ಧಾವಿಸೆನ್ನಲು ದೂರ ನಿಲ್ಲುವೆ
ಬಕುತನೆದೆಯನ್ನರಿಯಲು,
ಸಾವ ನೋವಿಗೆ ಜೀವ ಝಲ್ಲನೆ
ತಾಯಿ ನಿರ್ದಯಳೆನ್ನಲು;
ಕಂದನೆಂಬಾ ದಯೆಯೊಳು
ಬಂದು ನಿಂತೆಯೆ ಬಗೆಯೊಳು
ಇಂದು ಕೈಬಿಡಲೆಂತು ಬದುಕುವೆ,
ಅಂದಗೇಡಿಯು ಬಾಳುವೆ ?

೨

ಕರೆವನೋರ್ವನು ನಲ್ಲೆ ಎನ್ನುತ
ಕೆಳದಿಯೆಂಬಾ ಬಗೆಯೊಳು,
ಕರೆಯಬಹುದೇ ನಿನ್ನನೀಪರಿ
ಪ್ರಣಯವೆಂತೋ ನಿನ್ನೊಳು ?
ಎರೆಯ ತನದಲಿ ಮರೆಯಬೇಕೇ-
ನಮ್ಮ ! ನಿನ್ನಯ ಬಕುತರು
ಹರೆಯ ಹಕ್ಕಳಿಸಾಡಿ ಕೆಡುವರೆ
ಭಾವ ದೇವಿಯ ಮಕ್ಕಳು?
'ರನ್ನೆ' ಎನ್ನುವನೊಬ್ಬನು
'ಚೆನ್ನೆ' ಬಾ, ಎಂದೊಬ್ಬನು
ನಿನ್ನ ಪರಿಪರಿ ಕರೆಯಬಲ್ಲರು
ಕವಿಗಳೆಂಬುವರೆಲ್ಲರು.

೩

ಕರೆಯಲಾರೆನು ಎಲ್ಲರಂದದಿ
ಬೇರೆ ರೀತಿಯ ಬಿಂಬಿಸು;
ಮೊರೆಯ ಕೇಳದೆ ಸಾಗಬೇಡೌ
ಕಿರಿಯ ಮಗನನು ಚುಂಬಿಸು,
ನಿನ್ನ ಚುಂಬನ ಭಾವದುಂಬಿಸಿ
ನವಿರನೆಬ್ಬಿಸಿದಾಗಲು
ನಿನ್ನ ಗಾನವೆ, ನಿನ್ನ ತಾನವೆ
ನವಿರು ನವಿರಿಗು ಸೂಸಲು
ನಿನ್ನ ನೊರೆ ಹಾಲ್ಚಿಮ್ಮಲಿ
ನನ್ನ ಹಸಿವೆಗೆ ಸಲ್ಲಲಿ
ಓಡಿ ಬಾರೌ! ಹಸುಳ ಹಸಿದಿಹೆ,
ಓಡಿ ಬಾರೆಂದೊರಲುವೆ.

# ಕನ್ನಡದ ಸೇವೆಗೆ

೧

ಬನ್ನಿ ಬನ್ನಿರಿ ಬನ್ನಿ ಕನ್ನಡನಾಡ ಚೆಲುವಿನ ಚೆನ್ನರೆ
ಬನ್ನಿ ಬನ್ನಿರಿ ಬನ್ನಿ ಕನ್ನಡ ತಾಯಿಯೊಲವಿನ ಮಕ್ಕಳೆ
ನುಡಿಯ ಸೇವೆಗೆ ಬನ್ನಿರಿ!
ನಾಡಗುಡಿಗೈತನ್ನಿರಿ!
ಹೊನ್ನ ಕನ್ನಡ ನಾಡ ಬಾವುಟವೆತ್ತಿ ಮೆರೆಸುತ ಬನ್ನಿರಿ

೨

ನಾಡ ಗಡಿಯೊಳು ಗುಡಿಯ ನಿಲ್ಲಿಸಿ ಕನ್ನಡತ್ವವ ಬೀರಿರಿ
ಬೀಡು ಬಿಟ್ಟವರೆಲ್ಲ ಕನ್ನಡ ಮಕ್ಕಳೆಂಬುದನರಿಯಿರಿ
ವೀರರುದಿಸಿದ ನಾಡಿದು!
ವೀರೆಯರ ತವರೂರಿದು!
ತೋರ ಬನ್ನಿರಿ ನಿಮ್ಮ ವೀರವಸಿಂದು ಕನ್ನಡ ಮಕ್ಕಳು

೩

ಕಿರಿಯರೆನ್ನದೆ ಹಿರಿಯರೆನ್ನದೆ ಯುವಕರೆನ್ನದೆ ಬನ್ನಿರಿ
ಹರಿದು ಹಂಚಿ ವಿಭಾಗವಾಗಿಹ ಕನ್ನಡಮ್ಮನ ನೆನೆಯಿರಿ
ನಿಮ್ಮ ಶಕ್ತಿಯ ತೋರಿರಿ!
ತಾಯ ಮುಕ್ತಿಗೆ ಹಣಗಿರಿ!
ಒಂದೆ ದನಿಯಲಿ ಕೂಗಿ ನಾಡಿನ ಬಲದ ನಾಡಿಯ ಮಿಡಿಯಿರಿ

೪

ನುಡಿಯ ದೇವಿಯ ಪೂಜೆಗೆಯ್ದರೆ ನಾಡದೇವಿಯು ಮೆಚ್ಚಳೆ?
ನುಡಿಯೆ ನಾಡಿನ ಜೀವವೆಂದರೆ ಬಲ್ಲ ಹಿರಿಯರು ಮೆಚ್ಚರೆ?
ನಾಡ ರಂಗಸ್ಥಳದಲಿ
ನುಡಿಯ ರಾಣಿಯು ಬೆಳಗಲಿ
ನುಡಿಯ ಬಕುತರು ನಾಡ ಸೇವಕರೆಲ್ಲ ಬನ್ನಿರಿ ಪೂಜೆಗೆ

೫

ಕವಿಗಳೆಲ್ಲರು ಬನ್ನಿ ಲೇಖನ ಬರೆಯ ಬಲ್ಲವರೆಲ್ಲರು
ಬಾಳ ಕನ್ನಡಿಯಲ್ಲಿ ತೋರಿಪ ಕುಶಲ ನಾಟಕಕಾರರು
ಬನ್ನಿ ವಾಗ್ಮಿಪ್ರವರರು !
ಬನ್ನಿ ಭಾಷಾತಜ್ಞರು !
ಬನ್ನಿ ಪೂಜೆಗೆ ತಾಯ ಸೇವೆಗೆ ಕನ್ನಡಮ್ಮನ ಮಕ್ಕಳು

೬

ಕನ್ನಡಮ್ಮನ ಕಾವ್ಯ ಮಂಡಪದಲ್ಲಿ ದೇವಿಯ ಪೂಜೆಯು
ಬಂದ ಕವಿಗಳ ಹಾಡಿನೊಂದಿಗೆ ಕನ್ನಡಮ್ಮನ ಸೇವೆಯು
ಸಗ್ಗದವರಿದ ನೋಡಲಿ
ಕುಗ್ಗದೆದೆಗಳ ಕಾಣಲಿ
ಕನ್ನಡಮ್ಮನ ಗಂಡು ಮಕ್ಕಳ ಖ್ಯಾತಿ ಮುಗಿಲನು ಮುಟ್ಟಲಿ

೭

ಕಾವ್ಯ ಮಂಡಪದಲ್ಲಿ ಕವಿಗಳು ಹೊನ್ನ ತಳಿಗೆಯನೆತ್ತಲು
ಕನ್ನಡಮ್ಮನ ಕಾವ್ಯಲಹರಿಗೆ ನುಡಿಗಳಿಂಚರದುಂಬಲು
ಮಾತು ಗೀತೆಗಳಾಗುವ
ಖ್ಯಾತಿ ಕನ್ನಡಕೆಂಬುವ
ಕಬ್ಬದಿನಿದನಿ ಕೇಳ ಬನ್ನಿರಿ ಕನ್ನಡಮ್ಮನ ಬಕುತರು

೮

ಬನ್ನಿ ಬನ್ನಿರಿ ಬನ್ನಿ ಕನ್ನಡ ನಾಡ ಚೆಲುವಿನ ಚೆನ್ನರೆ
ಬನ್ನಿ ಬನ್ನಿರಿ ಬನ್ನಿ ಕನ್ನಡ ತಾಯಿಯೊಲವಿನ ಮಕ್ಕಳೆ
ನುಡಿಯ ಸೇವೆಗೆ ಬನ್ನಿರಿ !
ನಾಡಗುಡಿಗೈತನ್ನಿರಿ!
ಹೊನ್ನ ಕನ್ನಡನಾಡ ಬಾವುಟವೆತ್ತಿ ಮೆರೆಸುತ ಬನ್ನಿರಿ

# ತಾಯ್ನಾಡು

೧

ಹೆಮ್ಮೆ ಮೀರಿ ಮೆರೆದಳೊಮ್ಮೆ
ಬಿಮ್ಮು ತೋರಿ ಬಿಗಿದಳೊಮ್ಮೆ
ನಾಡನೆಲ್ಲ ಗೆದ್ದಳೊಮ್ಮೆ
ಕನ್ನಡಮ್ಮನು;
ಬಿರುಸು ಗಾಳಿ ಬೀಸಲಾಯ್ತು
ಸರಸ ನಾಡು ಮುರಿದುಹೋಯ್ತು
ಮೆರೆದ ಹೆಮ್ಮೆ ಹಾರಿ ಹೋಯ್ತು
ಕನ್ನಡಮ್ಮನ!

೨

ಹಿರಿಯರೆಲ್ಲ ನೆತ್ತರಿಳಿಸಿ
ಕರಿಯ ನಾಡ ಕೀರ್ತಿಯುಳಿಸಿ
ಮರೆಗೆ ನಿಂತು ನೋಡುತಿಹರು
ಕನ್ನಡಣುಗರ;
ತಾಯಿನಾಡಿನರಿವದೆಗೆದು
ಬಾಯ ಮಾತಿನಿಂದ ನೆಗೆದು
ಸ್ವಾಭಿಮಾನ ಶೂನ್ಯರಾದ
ಕನ್ನಡಣುಗರ.

೩

ಹೇಡಿ ಬಾಳನೆಳೆವ ನೀವು
ಮಾಡಿದು ಸಿಡಿಯಬಾರದೇಕೆ?
ನಾಡಗುಡಿಯ ನೆಡದ ನೀವು
ಹೇಡಿ ಮಕ್ಕಳೆ!
ಹಿರಿಯರಶ್ರುಧಾರೆಯಿಂತು
ಧರಣಿಯೊಡಲ ನೆನೆಸಿ ತಿಂದು
ಕರಳು ಕೆರಳೆ, ನುಡಿವರಿಂತು
ನೋಡಿ ಮಕ್ಕಳೆ!

೪

ಹಿರಿಯರಾತ್ಮಶಾಂತಿಗಾಗಿ
ಹರಿದ ನಾಡ ತಿರುಗಿ ಕಲೆಸಿ
ಹುರುಪಿನಿಂದ ಕೂಗಿರೊಮ್ಮೆ
ದೇವನರಿಯಲಿ,
ದೇವ ಕಣ್ಣು ತೆರೆಯಲಾಗ-
ದಾವ ಶಕ್ತಿ ನಿಂತರೇನು?
ಕಾವ ಶಕ್ತಿ ಕವಚವಿರಲು
ಮುಕ್ತಿ ಸನಿಹವು

# ಕಲೆಗೆ

೧

ತಿಳಿ ನಾಲ್ಕರೊಡೆಯನೇ ವಿಶ್ವ ಸೌಂದರ್ಯ ರುಚಿ
ಜಗಕೆಲ್ಲ ಹಚ್ಚುತಿಹನು
ಕಲೆಯ ಬಲ್ಲವನವನೆ ಹೊಸ ಹೊಸದ ಸೃಷ್ಟಿಯನು
ಬಗೆಯಿಂದ ಚಿತ್ರಿಸುವನು.

೨

ಕಲ್ಪನೆಯ ರಸವುಣಿಸಿ ತಿಳಿವೊಸಲ ಸೀರ್ಕುಡಿಸಿ
ರಾಗಿಣಿಯ ರಾಗದಲ್ಲಿ
ಸಿಲ್ಪಿಗನ ಭಾವನಾಶ್ವವನೇರಿ ನಿನ್ನೊಡನೆ
ಮಿರುಗುವನು ಗಗನದಲ್ಲಿ.

೩

ಜೀವನದ ಕಲಹದಲಿ ಬಾಳು ಬೇಗುದಿಗೊಂಡ
ಕಾರಿರುಳ ನಸುಕಿನಲ್ಲಿ
ಭಾವನೆಯ ಬಣ್ಣಕ್ಕೆ ನಿನ್ನ ಸೊಬಗನು ತೊಡಿಸಿ
ಬಾಳು, ಬಲದಿಚ್ಚೆಯಲ್ಲಿ.

೪

ನಿನ್ನ ಜೀವನವೆನ್ನ ನೈಗೊಂಡ ಭಾಗ್ಯಸಿರಿ
ನನ್ನಿರವಿಗೆನಿಸುವಂತೆ
ಕನ್ನಡದ ರಸಿಕಂಗೆ ಕೈಗನ್ನಡಿಯು ನೀನೆ
ತನ್ನಾತ್ಮ ಜ್ಯೋತಿಯಂತೆ.

೫

ಬಾಳು! ಬಾಳಿಲೆ ಕಲೆಯೆ! ನಾಡಹಂದರದಲ್ಲಿ
ಮಿರುಗುತಿರು ತಾರೆಯಂತೆ.
ಬೆಳೆಯುತಿರು ಬೆಳಗುತಿರು ನಾಡ ಮಂದಿರದಲ್ಲಿ
ಕರುನಾಡ ಕೂಸಿನಂತೆ.

## ಗಿರಿಯ ವೆಂಕಟು!

೧

ಧರೆಯ ದೇವಪುರದ ಮಹಿಮೆ-
ಯರಿದು ಬಲ್ಲಿರಾ?
ಕರುಣೆಯಾಂತ ದೇವನೊಲುಮೆ-
ಯನ್ನು ಕಂಡಿರಾ?

೨

ಗಿರಿಯನೇರಿ ನೋಡಿರೊಮ್ಮೆ
ದೇವ ಪ್ರತಿಮೆಯ
ಕರುಣೆಯ ಕಾಲಿಂದ ಚಿಮ್ಮಿ
ನಿಂತ ಮೂರ್ತಿಯ

೩

ಮೆಟ್ಟಿಲೇರುತೇರುತಂತೆ
ಕುಂಟ ಕುರುಡರು
ಹೊಟ್ಟೆ ಹೊಟ್ಟೆ ಬಡಿದುಕೊಂಬ
ದೀನ ಬಧಿರರು

೪

ಆರ್ತ ಸ್ವರದಿ ಕೂಗಿಕೊಳುವ
ಹೆಣ್ಣು ಮಕ್ಕಳು
ಹಸಿವೆಯಿಂದಲೊಡಲ ಹೊಸೆವ
ಹಸಿದ ಮಕ್ಕಳು.

೫

ಅಂಗಲಾಚಿ ಬೇಡಿಕೊಂಬ
ಅಂಗ ವಿಕಲರು
ಬೆಂದು ಬಳಲಿ ಗಂಟಲೊಣಗಿ
ಬರಲುತಿರುವರು.

೬

ಜಗದ ಕರುಣೆ ಕೂಡಿ ಬಂದು
ನಿಂದ ಮಡುವಿದು—
ಬಡವರೊಡಲ ನೀರು ಹರಿದು
ಕುದಿಯುತಿರುವುದು.

೭

ದೀನವಾಣಿ ಗಿರಿಯನೆಲ್ಲ
ಸುತ್ತುತಿರುವುದು
'ಅಯ್ಯೋ! ಹಸಿವು!' ಎಂಬ ಸೊಲ್ಲೆ!
ಮಾರು ತರುವುದು.

೮

ಗಿರಿಯ ಹತ್ತಿ ಬನ್ನಿರೊಮ್ಮೆ
ಮಿಡಿದು ಕಂಬನಿ
ಕರುಣೆಯೊತ್ತಿ ಕಾಣಿರೊಮ್ಮೆ
ನೆರೆದ ಸಂದಣಿ.

೯

ಅಲ್ಲಿ ಹಸಿವು, ಇಲ್ಲಿ ತೇಗು
ಕೂಳಿನುಬ್ಬಸ
ತೆರೆದ ಒಡಲು ಕೊರಯುತಿರಲು
ಹೊನ್ನಿನಕ್ಕಸ.

೧೦

ನೋಡಿದತ್ತ ಬೆಡಗು ರೂಪು—
ದಾಳಿ ನಿಂತಿದೆ
ಬಡವರೊಡಲ ಬೇಗೆಯಲ್ಲಿ
ಏರದಂತಿದೆ.

೧೧

ಹಣದ ಸರದ ಕಾಲುಗೆಜ್ಜೆ
ಮೋಸ ಹೆಣ್ಣಿಗೆ
ಗಿರಿಯು ಶಿಖರ ಆಟಕಾಯ್ತು
ಹೊನ್ನ ಹೆಣ್ಣಿಗೆ

೧೨

ಪೂಜೆಯವರ ವೇದ ಘೋಷ
ಹಣದ ನುಡಿತಕೆ
ತಾಳ ಹಾಕಿ ಕುಣಿಯುತಿಹವು
ಗುಡಿಯ ಸನಿಹಕೆ

೧೩

ಹಣದ ಹೊಳೆಯು ಮೊರೆಯುತಿಂದು
ಹರಿದು ಬರುತಿದೆ
ಕಣಜದಲ್ಲಿ ತುಂಬಲೆಂದೆ
ಮೀಸಲಾಗಿದೆ

೧೪

ದೇವನೆಡೆಗೆ ಕೂಳಕೋಟೆ
ಮುದ್ರೆಯೊಡೆದಿದೆ.
ಸಾವನೆಡೆಗೆ ಬೋನದೂಟ
ಬೀಗ ಜಡಿದಿದೆ.

೧೫

ಇಲ್ಲಿ ಪೂಜೆಗೆಯ್ವರಾರು?
ಪೂಜ್ಯರೆನ್ನಲೆ ?
ಪೂಜ್ಯ ಕುಲದಿ ಜನ್ಮವೆತ್ತ
ಡಂಭರೆನ್ನಲೆ?

೧೬

ಮೋಸವೆಣ್ಣಿಗೊಲಿದು ನಿಂತ
ಭಂಡರೆನ್ನಲೆ?
'ಗುಡಿಯೊಳೆಲ್ಲಿ ದೋಷ' ಎಂಬ
ಪುಂಡರೆನ್ನಲೆ?

೧೭

ಹುಸಿಯೆ ವೇದ, ಕಪಟವೆ ಮನು
ಸ್ಮೃತಿಯು ಆಗಿದೆ
ಹಸೆಯ ಮೇಲೆ ನಿಂತ ಬ್ರಹ್ಮ
ಕಣ್ಣು ಮುಚ್ಚಿದೆ.

೧೮

ದೇವ ಸನ್ನಿಧಾನದಲ್ಲಿ
ಜಿಂಕೆಬಿದ್ದಿದೆ
ತೆರೆದ ಒಡಲ ಬಿರಿದಕಣ್ಣು
ಮೊಷ ಹಾಕಿದೆ

೧೯

ರಕ್ತಹೀನ ಕರುಳಸಾಲು
ಮಾಲೆಗಾಗಿವೆ.
ತೀರ್ಥ ಪಾತ್ರೆಯಲ್ಲಿ ರಕ್ತ
ವರ್ಧನಿಂತಿದೆ.

೨೦

ಪೂಜೆಗೆಯ್ವ ಕ್ಷುದ್ರರಿವನು
ಕಾಣಬಲ್ಲರೆ?
ಪೂಜ್ಯ ವಸ್ತುವೆಂಬ ದೇವ
ಕಣ್ಣು ಮುಚ್ಚಿರೆ.

೨೧

ಗಿರಿಯ ತೊರೆದು ಹೊರಗೆ ಬಾರೊ
ಗಿರಿಯ ನಾಯಕಾ !
ಬಡಸಹಸ್ರರೊಡಲು ನೋಡೊ
ಗಿರಿಯ ವೆಂಕಟಾ !

೨೨

ದೇವ ! ನೆರೆಯ ಹರಿದು ಬಾರೊ
ಕಲ್ಲು ಕವಚದಾ
ಸಾವರೆದೆಗೆ ತಣಿವ ಬೀರೊ
ನೀನೆ ಬಲ್ಲಿದಾ !

# ಇರವಿನ ಮರೆವು

೧ ಅಣ್ಣನ ಒಳಗಣ ಹಕ್ಕಿಯು ಹಾರಿ
ಹೊರಗಣ ಹಕ್ಕಿಯ ಕೂಡಿದುದು
ಮುಚ್ಚಿದ ಬಾಯಿಯು ಮುಚ್ಚೇ ಹೋಯಿತು
ಕಂಗಳ ದಾರಿಯು ತೆರವಾಯ್ತು.

೨ ಅಮ್ಮನ ಕರುಳಿನ ಕಾಲುವೆಯುಕ್ಕಿತು
ರಮಣಿಯು ಅತ್ತಳು ಗೋಳಾಡಿ
ತಮ್ಮನು ತಂಗಿಯು ಎಲ್ಲರು ಬಿಕ್ಕಿ
ಕಂಬನಿಗರೆದರು ಭೋರಾಡಿ.

೩ ಎಷ್ಟೇ ಅತ್ತರು ಅಣ್ಣನು ಬರುವನೆ?
ಬಾರದ ನಾಡಿಗೆ ಹೋಗಿಹನು
ಆದರು ಅಮ್ಮನ ಕರುಳನು ಸೀಳಿ
ಚಿಮ್ಮುತಲಿರುವವು ಕಣ್ಣೀರು.

೪ ಮಗನೇ ಎನ್ನುತ ಮುದ್ದನು ಕೊಟ್ಟ
ತಾಯಿಯ ಕರುಳಿನ ಕೊರೆಯೆಲ್ಲಿ?
ಪ್ರೇಮದ ಮೂರುತಿ ಬಾರೋ ಎನ್ನುವ
ನಲ್ಲಳ ನಲವಿನ ಕರೆಯೆಲ್ಲಿ?

೫ ಮೋಹದ ಮರೆಯಲಿ ಮಾಯೆಯು ಇಣಕಲು
ದೇಹವು ಸಾಗಿತು ಮಸಣಕ್ಕೆ
ಅಣ್ಣನ ಹಿಂದಿನ ಕುರುಹುಗಳೆಲ್ಲಿವೆ?
ಮರೆತುವು ಕಾಯವು ಹುಡಿಯಾಗೆ.

೬ ಮಾಯೆಯು ಮುಸುಕನು ಮಾನವನುಟ್ಟು
ಗುಟ್ಟನು ಕಾಣದೆ ನರಳುವನು.
ದೇವನು ಮೋಡದ ಮರೆಯೊಳು ನಿಂತು
ಮಾನವರಾಟಕೆ ನಗುತಿಹನು.

# ವೇದದ 'ವಾಲಿ'

೧

ಅಂದಿನ ಕನಸನು ನೆನೆದೆಚ್ಚತ್ತರೆ
ಭೀತಿಗೆ ಮನಸೆರೆಯಾಗುವದು
ಎಂದಿಗು ನೆನಸನು ಮರೆಯುವದೆಂದರೆ
ಸಾವಿನ ಮಂದಿರಕೇರುವದು.
ನಿದ್ದೆಯೊಳಿದ್ದರು ಎಚ್ಚರವೆನಗಿದೆ
ಎಚ್ಚರವಿದ್ದುದು ನಿದ್ದೆಯಲಿ
ನಿದ್ದೆಯ ನಾಡೊಳಗೆಚ್ಚರವೇನಿದು ?
ಬೆಚ್ಚಿಕೆ ಬೆಳೆಯಿತು ಕತ್ತಲಲಿ
ಮಬ್ಬಿನ ಮುಸುಕನು ಹರಿದೊಗೆದೆ
ಬೆಚ್ಚಿದೆನೊಮ್ಮೆಲೆ ಒಳಹೊರಗೆ.
ಅಕ್ಕಟ ! ಎಲ್ಲೆಡೆ ಹೊಗೆಮಂಜು.
ಕಾಣದು ಕತ್ತಲೆ ನೆಲೆದಂಚು.
ನೆಲವನು ಮುಚ್ಚಿತು ಮುಗಿಲನು ಹೊಚ್ಚಿತು
ದಾಟಿತು ಭೇದಿಸಿ ನೆಲದಗಲ.
ಸಗ್ಗವನಡರಿತು ನರಕವನೆರೆಯಿತು
ಭೀಕರವಾದಾ ಹೊಗೆಮಂಜು.

೨

ಕಂಗಳನರಳಿಸಿ ನೋಡುತ ನಿಂತಿರ
ಲಾವುದು ಕಾಣದು, ಬರಿಬಯಲು,
ದೂರದಲೇನೋ ಮಿನುಗಿತು ಚಣದಲಿ
ಕಲಕಿತು ಹಬ್ಬಿದ ಹೊಗೆಯೊಡಲು
ತೇಲುತ ಬರುತಿಹುದಾವುದೊ ರೂಪವು
ಮಂಜಿನ ಸಾಗರ ಓಸರಿಸಿ
ಬೀಳುತಲಿರುತಿಹುದೇನನೊ ಚಪ್ಪಿಸಿ
ಹಿಡಿವುದು ಜವದಲಿ ಸಾವರಿಸಿ.

ಹೆಚ್ಚಿದ ಹೊಗೆಯನು ಕುಡಿಕುಡಿದೇಳಲು
ಸಿಚ್ಚಳವಾಯಿತು ಜಗವೆಲ್ಲ
ಅಕ್ಕಟ! ನೋಡಿದೆ ವಿಚಿತ್ರರೂಪವ
ಬೆವರೊಳಗದ್ದಿತು ತನುವೆಲ್ಲ.

ಅಯ್ಯೊ! ಕೆಟ್ಟೆನು ಎಂದೊದರಿ,
ದೊಪ್ಪನೆ ಬಿದ್ದನು ಹೌಹಾರಿ;
ಗಡಗಡ ನಡುಗಿತು ನನ್ನೆದೆಯು,
ನೋಡದೆ ಮುಚ್ಚಿತು ಕಣ್ಣೆವೆಯು.

ಏನಿದು ಜಂಗುಳಿ ಕಿರಿಚುವ ದನಿಯು
ಮಾನವರೇತಕೆ ಒರಲುವರು?
ಹಾರುವರೀಯೆಡೆ ಜಂಗಮುರಾಕಡೆ
ಬೊಬ್ಬಿಡೆ ಬಿರಿಯಿತು ಮುಗಿಲೊಡಲು.

ಭೀಕರದಾಕೃತಿ ಮುಂಗಡೆ ಸಾಗಿದೆ
ಬಂದಿತು ಹಿಂಗಡೆಗೀದಂಡು—
'ಅಕ್ಕಟ! ವಾಲಿಯು ವೇದದ ವಾಲಿಯು!
ಎತ್ತಿದೆ' ಎನ್ನುವ ಈ ಹಿಂಡು.

೩

ಕಂಗಳ ಮಿಟುಕಿಸಿ ದಿಟ್ಟಿಯ ನಿಲ್ಲಿಸಿ
ನಡುಗುತ ನಿಂತೆನು ಮೌನದಲಿ
ಎಲ್ಲಿದೆ? ತೋರದು ವಿರಾಟ ಮೂರುತಿ
ಅದೃಶ್ಯವಾಯಿತು ಬಯಲಿನಲಿ

ಅರಚುತ ಅರಚುತ ಓಡುತ ಜಂಗುಳಿ
ಗಕ್ಕನೆ ನಿಂತಿತು ಭಯದಲ್ಲಿ
ಅಡಗಿದನಕ್ಕಟ! ಭೀಕರ ರಕ್ಕಸ
ನಯ್ಯೋ! ಕಾಣನು ಬಯಲಲ್ಲಿ

ಮುಂಗತಿಗಾಣೆವು ಹೋಯಿತು ವೇದವು
ಧರ್ಮದ ಮೂಲವು ಸಿಗದಿಲ್ಲಿ
ದುರ್ಗತಿ ಬಂದಿತು ಕಾಣದೆ ವೇದವು
ದರ್ಮಕೆ ಶೂಲವು; ಗತಿಯೆಲ್ಲಿ ?

ಕಂಬನಿ ಹೊನಲಲಿ ತೊಯ್ದಿತು ಜಂಗುಳಿ
ದಾರಿಯು ಕಾಣದೆ ಗೋಳಾಡಿ
ಧರ್ಮದ ಕಣಿಗಳು ಮುಮ್ಮಲ ಮರುಗಿದ
ರೆಲ್ಲಿಯು ಕಾಣದೆ ಚೀರಾಡಿ.

೪

ಏನವು ನಭದಲಿ ತೋರುತಿವೆ ?
ಹಕ್ಕಿಯು ತೆರದಲಿ ಹಾರುತಿವೆ.
ಇನ್ನೂ ಮೇಲಕೆ ಸಾಗುತಿವೆ.
ಚಿಕ್ಕೆಯು ನಾಡಿನ ಹತ್ತಿರಿವೆ !

ವೇದವು ! ವೇದವು ! ವೇದದ ವಾಲಿಗ
ಳೆಲ್ಲೆಡೆ ಕಂಡವು ಜಂಗುಳಗೆ
ಹಿಗ್ಗಿದ ಮನದಲಿ ಬೆಚ್ಚಿಕೆ ಮತ್ತಿದೊ
ಕೈಯೆಡೆ ಕಂಡರು ನಿಲುಕದಕೆ.

ಮುಗಿಲಿನ ದಂಡೆಯು ಬಲುಕೆಳಗೆ
ಭೂಮಿಯ ಅಂಚಿನ ಬಲು ಮೇಲೆ
ತೇಲುತ ನಿಂತಿವೆ ವೇದದ ವಾಲಿ !
ಮಾನವ ಹಂತಕೆ ನಿಲುಕದ ವಾಲಿ! !

ಅಯ್ಯೊ ! ಕೆಟ್ಟೆವು ಗತಿಯೇಮಗೇನು ?
ವೇದವ ಬಿಟ್ಟರೆ ನಡೆಯುವದೇನು ? ?
ಎನ್ನುತ ಬೊಬ್ಬಿಡಲಾದಂಡು
ನನ್ನೆದೆಗಾಯಿತು ಸಿಡಿಗುಂಡು.

# ಬಡವಿ

೧

ತೆರೆದಿರಲರೆದೇಹ
ಹೊರಟಿಹಳಿವಳಾರು ?
ಹೆಸರಿಗೆ ಬರಿವಸನ
ಮುಸುಕಿದೆ ಹೊರಮಾನ
ಹರಿದಿದೆ ಹನ್ನೆರಡು
ತೆರವಿದೆ ಹಗಲಿರುಳು
ಬಡಕಲು ಬಡದೇಹ
ಬೆಡಗಿನ ಸ್ತ್ರೀಕಾಯ
ಬಿಸಲಿನ ಬೇಗುದಿಗೆ
ತಂಡಿಗೆ, ತಂಬಸಿಗೆ.

೨

ಹಸಿವೆಯು ಝುಳದೋರೆ
ಕಸವಿಸಿ ಮೈದೋರೆ
ಬಡತನದರಿವಿನೊಳು
ಒಡಲಿನ ಕೂಗಿನೊಳು
ಬಡವಿಯು ಬಳಲುವಳು
ತಡೆಯದ ಹಸಿವಿನೊಳು
ಹೋರುವುದಿನ್ನೆಲ್ಲಿ ?
ಬೀದಿಯು ಕಂಡಲ್ಲಿ
ತಿರುಗುವಳನ್ನಕ್ಕೆ
ಕರುಣೆಯು ಮಂದಿರಕೆ.

೩

ಕೊಡುವರು ಕೊಟ್ಟವರು
ಬಿಡುವರು ನಿಷ್ಠುರರು

ಎಂಜಲು ಮುಸುರೆಯನು
ತಂಗಳು ತುಕುಡೆಯನು
ಧರ್ಮವ ತಿಳಿದವರು
ಧರ್ಮಕೆ ನೀಡುವರು
ಒಣಗಿದ ರೊಟ್ಟಿಯನು
ಗೊಣಗುತ ಚೆಲ್ಲುವರು
ಹಳಸಿದ ಅನ್ನವನು
ತಳಿಗೆಗೆ ಹೊಯ್ಯುವರು

೪

ಮೀರಿತು ಮಧ್ಯಾಹ್ನ
ತೀರಿತು ನಿನಗನ್ನ
ದೂರಿರು ನಡೆಯೆಂದು
ಹಾರುವರೆನ್ನುವರು.
ಸಂಜೆಯು ಸನಿಹದೊಳು
ಅಂಜದೆ ಬರುತಿಹಳು
ಛೀ ! ತೆಗೆ ! ಛೀಮಾರಿ
ಏತಕೆ ಹೆಮ್ಮಾರಿ
ಬರುತಿಹೆ ನೀನೆಂದು
ಕರಕರೆ ನಮಗೆಂದು
ಹರಟುವ ಚಪಲೆಯರು
ಬಿರುದನಿ ಬೀರುವರು.

೫

ಹಂಚಿದ ಅಗಳುಗಳ
ಎಂಜಲು ತುಣುಕುಗಳ
ತುಕ್ಕಡಿ ತುಂಡುಗಳ
ಮುಕ್ಕುವಳಾದರದಿ.

ಕೊಡದರು ಕೊಟ್ಟವರು
ಬಡವಿಗೆ ಧಾರ್ಮಿಕರು
ಎಂಜಲನಿಕ್ಕಿದರು
ಅಂಜದೆ ತಿನ್ನುವಳು
ಬಡವಿಯು ಇಂತಿಹಳು
ಒಡಲುರಿ ಬಿದ್ದವಳು

# ದೋಣಿ

೧

ಕಡಲ ಕಡಿಯ ತೆರೆಗಳುರುಳೆ
ದಡವನುಳಿದು ದೋಣಿ ಸಾಗಿದೆ
ಬೀಳುತೊಮ್ಮೆ
ತೇಲುತೊಮ್ಮೆ
ಕಡಲ ಕಡೆಯ ಕಾಣಲೆಂದು ಧಾವಿಸುತ್ತಿದೆ.

೨

ತಡಿಯ ತೊರೆದ ನಾವೆಗೆನಿತು
ತೊಡಕು ನೀರವೀದಿಯಲ್ಲಿವೆ;
ದೋಣಿಗಾರ
ಕಾಣಲಾರ
ದಡದಲಾಶೆ! ಸಾಗರದೊಳಗೋಡಿಸುತ್ತಿದೆ

೩

ಓಡುತೋಡುತಿರಲಿ ನಾವೆ
ದೂಡು ಮುಂದೆ ದೋಣಿ ಸಾಗಲಿ;
ದಡವ ಬಿಟ್ಟು
ಹಿಡಿಯ ಹುಟ್ಟು
ನಾಡು ಹಿಂದೆ ಕಾಡು ಮುಂದೆ ದಡವು ದೂರವೆ.

# ಅವತಾರ

೧

ಹಿಂದೊಮ್ಮೆ ವಿಶ್ವದೊಳೆ ಸರಿಯಿಲ್ಲದಂತಿರ್ದ
ಹಿಂದು ಧರ್ಮದ ಗತಿಯು ಕಾಲಗತವಾದಂತೆ
ಹಾಳಾಗಿ ಕಳೆಗೆಟ್ಟು ಚೇತನಕ್ಕೆರವಾಗಿ
ಸುಡುಗಾಡಿಗೊಯ್ಯುಲಿಹ ಹೆಣದಂತೆ ತೋರುವುದು
ಯಾವ ಪಾಪದ ಫಲವು ? ನಮ್ಮ ಜನಗಳ ಗೋಳು
ನಮ್ಮ ಧರ್ಮದ ಕೇಳು, ದಿನದಿನವು ಬೆಳೆಯುಲಿಕೆ
ಮೂಲದಲಿ ಬೋಧಿಸಿದ ತಾತ್ತ್ವಿಕರ ಮಂತ್ರದಲಿ
ಕುಂದಿದೆಯೆ ? ವೇದಾಂತದೊರೆಗಲ್ಲು. ತಾತ್ತ್ವಿಕರ
ಹಿರಿಸೊಲ್ಲು, ಅವತಾರಿ ಪುರುಷರಾ ತವರೂರು
ಹಿಂದುಗಳ ಹಿರಿಧರ್ಮ. ಶಂಕರನು ಹುಟ್ಟಿದನು
ಹಿಂದುಗಳನುಳುಹಿದನು. ಮುಂದೆ ಬಹ ಕಾಲದಲಿ
ಶತಮಾನಕೇಸುಜನವಾಂತರೋ ಹಿಂದು ಹಿಂ
ಡಾಗಿಲ್ಲಿ ಅವತಾರಗಳನು ! ಅಚ್ಚಚ್ಚರಿಯು !
ಮಿತಿಯಿಲ್ಲದವತಾರ ಪುರುಷರನು ಹೆತ್ತ ಹಿಂ
ದೂ ದೇವಿ, ಕೊರಗಿನಲಿ, ಮರುಗಿನಲಿ, ಕಣ್ಣಾಪನಿ
ಹರಿಸುವಳು; ಬೆಂದೊಡಲುರ್ಮುಳಕೊಣಗಿ ಬಾಡಿಹಳು.
ನಮ್ಮ ಧರ್ಮದ ತೇಜ ನಮ್ಮವರಿಗಿರದಾಯ್ತೆ ?
ಕಡೆಗೆ ನೋಡಿದಿರೇನು ? ಸರ್ವನಾಶವಿದೇನು ?
ನಮ್ಮ ಹಿರಿಮಾನಿಸರ ಹುರಳುನುಡಿ ಹಾರಿಸಲು
ಮಮ್ಮದನೊಬ್ಬನೆ ಸಾಕಾದ
ಯೇಸುಕ್ರಿಸ್ತನೆ ಬೇಕಾದ

೨

ಧರ್ಮದುರಿಯಾರುತಿರೆ ಧರ್ಮವಂತರ ಸಾಲು
ವೇದಾಂತದುಸಿರಿಂದ ಹಿಂದುಗಳ ಕಾಯ್ವಾಗ

ನರ್ಮ ಧರ್ಮದ ನೆಚ್ಚು ನಮ್ಮ ಜನಗಳ ಮೆಚ್ಚು
ಸಡಿಲಾಗಿ, ಮಂಜುಗಡ್ಡೆಯು ತೆರದಿ ನೀರಾಗಿ
ಗೋಳಿನುಸಿರಿನ ಝಳದಿ ಉಗಿಯಾಗಿ, ಹವೆಯಾಗಿ
ಹಾರಿಹುದ ಕಾಣುವೆವು. ಪರಕೀಯರುನ್ಮತ್ತ
ಹೆಜ್ಜೆಗಳ ತುಳಿತಕ್ಕೆ ನಮ್ಮವರು ಬಾಗಿಹುದು,
ಬೊಗ್ಗಿತಲೆ ಕೊಟ್ಟಿಹುದು, ಅವತಾರ ಹೊತ್ತವರ
ದಿವ್ಯದನಿಯಡಗುವುದು, ವೇದಾಂತ ಬಲ್ಲಿದರ
ಹಿರಿಮಾತು ಸರಿಯುವುದು ಅಚ್ಚರರಚ್ಚರಿಯು ಕಟ!
ಬಲ್ಲಿದರ ವೇದಾಂತ ನಮ್ಮವರ ಕೊಲೆಗಾಗಿ
ಹಿಂದುಗಳಿಗುರುಲಾಗಿ ಬಾಳುವಂತಾಗಲಿಕೆ
ನುಡಿದ ನುಡಿಗಳ ನಡೆಗೆ ಕಿಡಿಬಿದ್ದು ಬಿಟ್ಟಿತೆ?
ಕೇಳಿ! ಹೇಳಿಹುದೇನು?

ಅಂದಿನಿಂದಿಂದಿಗೂ ಮುಂದೆಯೆಂದೆಂದಿಗೂ
ಜನದ ಸಾಸಿರ ಮನದಿ ನಿಂತ ನುಡಿ ನುಡಿದ ನುಡಿ!
ನುಡಿಸಾರವಿನ್ನೇನು? ವೇದಾಂತದುಸಿರೇನು?
'ಸರ್ವಂ ದುಃಖಂ, ಸರ್ವ ನಾಶಂ ಸರ್ವಂಕ್ಷಣಿಕಂ'
ಬಾಳು ಅಳಿವುದೆ ನಿಜವು ಬದುಕಿನಲಿ ಸೊಗವಿಲ್ಲ
ಇದ್ದ ಜನ್ಮಕೆ ಸೊಗಸು ಸಗ್ಗವಡರಿದ ಮೇಲೆ....
ಎಂದೇನೋ ಹೇಳಿದರು. ನಮ್ಮ ಗೋಳಿನ ಮೊಳಕೆ
ಚಿಗಿತು ಮರವಾಗಿಹುದು ಇಂತಹರ ಗಂಟಲಲಿ.
ಬದುಕಿನಲಿ ವಿಷದುಂಬಿ ಹಂಬಲವ ಕೊಳೆಯಿಟ್ಟ
ಅವತಾರಿ ಪುರುಷರಾ ದಿವ್ಯದನಿ ನಮಗಿಂದು
ಜವಗಂಟೆಯಾಯಿತೆಲೆ! ಬಾಳಿನಾಸೆಯ ಕಳೆವ
ವೇದಾಂತ ನಮ್ಮವರ ಕೊಲೆಗಾಯಿತು
ದಾಸ್ಯವೇ ಹಿಂದುಗಳ ಮನೆಯಾಯಿತು.

೩

ಆಲಸದಿ ಬಾಳುತಿಹ ಆಶೆಯುಳಿದಿಹ ಜನಕೆ
ವೇದಾಂತದೀಕೂಳು ಪರಮಾನ್ನವಾಯಿತೆಲೆ!
ಸೋಮನಾಥನ ಮೂರ್ತಿ ತುಂಡಾಗಿ ಬಿದ್ದಾಗ
ನಮ್ಮ ಸಿಂಹಾಸನವು ಪರದೇಶಕೆದ್ದಾಗ
ತುಂಗಭದ್ರೆಯು ಕೆನ್ನೆ ಕೆಂಪೇರಿ ಬಂದಾಗ
ನಮ್ಮ ದೇವಾಲಯದಿ ರಕ್ತನದಿ ಹರಿದಾಗ
ವೇದದೋಲೆಗಳೆಲ್ಲ ನೆತ್ತರಲಿ ಮಿಂದಾಗ
ದೇವಪ್ರತಿಮೆಗಳೆಲ್ಲ ಕಣ್ಣೀರ ಕರೆವಾಗ
ನಮ್ಮವರ ಹೆಬ್ಬೆರಳ ಚರಚರನೆ ತರಿವಾಗ
ಸರ್ವಂ ನಾಶಂ! ದುಃಖಂ! ಕ್ಷಣಿಕಂ!!
ದೇವನ ಮೂರ್ತಿಯು ಕಲ್ಲನೊಡೆದರೆ
ದೇವನ ರೂಪವು ಹೋದೀತೆ?
ನಮ್ಮನುತಳ್ಳಿನ್ನಾರದು ಬಂದರು
ನಮ್ಮನೆ ಹೊತ್ತಂತಾದೀತೆ?
ರಾಜ್ಯವ ಗೆದ್ದವರಿಲ್ಲಿಯೆ ಉಳಿವರು
ಸಗ್ಗದ ಹಾದಿಯು ಸಿಕ್ಕೀತೆ?
ಭಾರತ ದೇಶವನಾಳಿದರೇನದು
ಸಗ್ಗಕೆ ನಮ್ಮೊಡ ಬಂದೀತೆ?
ಯಾರಿರಲೇನು ಎಲ್ಲವು ತ್ಯಾಜ್ಯ
ಬದುಕಿನ ವ್ಯಾಜ್ಯ ...ಎಂಬುವ ವೇದಾಂತ
ಕೊಂದಿತು ನಮ್ಮವರ.
ಹಿಂದುಗಳೆಂಬವರ.

೪

ಮಲಗಿದ ಮಡದಿಯುನೊಯ್ಯುತಿರೆ
ಕರುಳಿನ ಕೂಸನು ಕೊಯ್ಯುತಿರೆ
ತುತ್ತಿನ ತಟ್ಟೆಯ ಮೆಟ್ಟುತಿರೆ

ಮಡದಿಯ ಮೋಹ! ಕೂಸೋ ಕ್ಷಣಿಕ!
ಕೂಳೇ ಸಾವು ಎನ್ನುವಿರಾ?
ಸಗ್ಗದ ಸುಖವನು ಬಯಸುವಿರಾ!
ನಿಮ್ಮಯ ಜೀವನಕೆರೆದಿಹ ಹೆಣ್ಣಿನ
ಮನ್ನಣೆಯುಳುಹದ ಹೇಡಿಗಳು
ಸಗ್ಗದ ಹೆಣ್ಣನು ಬಯಸುವಿರಾ?
ದೇವಲೋಕವದು ಹೇಡಿಗಳೂರೇ?
ಅನರ್ಥವಯ್ಯೋ! ಏಸನ್ಯಾಯ!
ಕಾಣದ ಲೋಕವನೆಳಸುವಿರಾ ?
ಕಂಡಿಹ ಬಾಳನು ತೆಗಳುವಿರಾ?
ಆರ್ತ ಸ್ವರದಲಿ ಹೆಂಡಿರ ಕೂಗು
ಹಸಿವೋ ಹಸಿವು ಮಕ್ಕಳ ಕಿರಿಚು....
ಎಲ್ಲಾ ಮಾಯವು ನಿಮಗಾಯ್ತೆ ?
ಬದುಕಿನ ಸಾರವು ಕನಸಾಯ್ತೆ?
ಬಾಳಿನ ಬೆಳಕನ್ನರಿಯದ ಹೇಡಿಗ
ಳೇಳಿರಿ, ಸಗ್ಗವನಡರಿರಿ ಕೂಡಲೆ,
ಜಗದಲಿ ಜೀವನ ನಿಮಗಿಲ್ಲಾ
ಅನರ್ಥವಾಗಲಿ ಒಮ್ಮೇ ಎಲ್ಲಾ
ಸಾಯಿರಿ ಸಗ್ಗಕೆ ಹೇಡಿಗಳೆಲ್ಲಾ
ಸತ್ತರೆ ಹೊಸಬರು ಬಂದಾರು
ಸತ್ಯದ ಬದುಕನು ಕಂಡಾರು.

೫

ನಿಲುಕದಿಹ ವೇದಾಂತ ನಿರ್ಜೀವಿಗಳಿಗಿರಲಿ
ಬದುಕಿನಾಶೆಯ ಹೊಂದಿ ಬಾಳನೊಗವನ್ನೀಂಟಿ
ಬೆಳೆಯುತಿಹ ಜೀವಿಗಳಿಗೇನು ಮಾಡುವದದನು ?
ಬಾಳನೆಳೆಯುವ ಮೊದಲೆ ಸಗ್ಗ ದೊರಕುವುದೇನು?
ಹುಟ್ಟಿ ಬಂದಿಹ ಸೃಷ್ಟಿಗೇನು ನಿಮ್ಮಯ ಸೇವೆ?

ಕಂಡ ಬಾಳಿನ ಕಣಸು ದೂರದೇಶದ ಕನಸೆ?
ಸತ್ತಮೇಲಿನ ಸೊಗವನಿದ್ದಾಗ ಬಯಸುವುದೆ?
ಬಾಳು ಅಳಿವುದೆ ನಿಜವು ಈ ಲೋಕಸುಳ್ಳೆಂಬ
ದುಃಖಮಯ ಸಂಸಾರ ನಮಗೇಕೆ ಬೇಕೆಂಬ
ವೇದಾಂತ ಬಲ್ಲವರು ಜಗಕೆ ಬಾರದ ಮುನ್ನ
ಏರಬಾರದೆ ಸಗ್ಗ? ಬೇಡವೆಂದವರಾರು?
ಹೇಡಿಗಳು ಬಂದಿಲ್ಲಿ ಹುಳಿಯ ಹಿಂಡುವಿರೇಕೆ?
ನಿಶ್ಶಕ್ತ ದುರ್ಬಲರ ಬೆಳೆಯಿಸುವ ವೇದಾಂತ
ನಿರ್ಜೀವ ಜಂತುಗಳ ಸೊಡೆಯಾದ ವೇದಾಂತ
ಕೊಳೆಬಿದ್ದು, ಹುಳಿಯಾಗಿ, ಹಳಸಿ ಹೋಗುವ ದಿನವೆ
ನಮ್ಮ ಭಾಗ್ಯದ ದಿನವು. ನಮ್ಮವರ ಮುಂಜಾವು.
ಬಾಳಿರೋ! ಬದುಕಿರೋ! ಈ ಬಾಳನೆಳೆಯಿರೋ!
ಬದುಕಿನಲಿ ಸವಿಯಿಹುದು, ಚೆಲುವು ತುಂಬಿಹುದೆಂಬ
ವೇದಾಂತಿವರನೊಬ್ಬನವತಾರ ಬೇಕೆಮಗೆ
ಅವನೆಮ್ಮ ಗುರುದೇವ!
ಅವ ನನ್ನ ದೇವ.

# ಹರುಷದ ಹಾಡು

೧ ಏತಕೆ ಸುಮ್ಮನೆ ಬಿದ್ದಿಹೆ ಜೀವವೆ
ಹರುಷದ ಹಾಡನು ಹಾಡೇಳು !
ಮಾತಿಗೆ ಮೀರಿಹ ಮೋದವನೆದೆಯಲಿ
ತುಂಬುವ ಹರುಷದಿ ಹಾಡೇಳು.

೨ ಬಾಂದಳದೆಲ್ಲೆಡೆ ಹಾರುವ ಹಕ್ಕಿಯು
ನೆನೆವುದೆ ಸಾವಿನ ಸಂಗತಿಯ?
ಬಾಂದೊರೆ ನಲಿಯುತ ಹರಿಯುವ ಕಾಲದಿ
ನೆನೆವುದೆ ಮೊದಲೇ ಮುಂಗತಿಯ ?

೩ ಸಾವಿನ ದೂತರು ನಿನ್ನೆಡೆಗೈದಲು
ಅಂಜದೆ ಹರುಷದಲೆದ್ದೇಳು.
ದೇವನ ಕಾಣುವೆನೆಂಬುವ ಭರವಸೆ-
ಗಿಂಬಿಡು, ಜವನೊಳು ಬಿಗಿಯದಿರು.

೪ ನೆತ್ತರ ಹರಿಯದ ಗಾಡಿಯೊಳುಕ್ಕುವ
ಹೊತ್ತಿನೊಳೇತಕೆ ಬೆಚ್ಚುವೆಯೊ ?
ಸತ್ತರೆ ಮುಪ್ಪಿನ ಕಾಟವು ತಪ್ಪಿತು
ಮತ್ತೀಳಿಗಿಳಿಯುವೆನೆಂದೇಳೊ !

೫ ಹಾಡೆಲೆ ಹಕ್ಕಿಯೆ! ತಡೆಯುವುದೇತಕೆ
ಗಾಳಿಯೊಳೆಲ್ಲೆಡೆ ಜಿಗಿದಾಡಿ
ಹಾಡುತ ಹಾರುತ ಸಗ್ಗದ ನಾಡಿನ
ಮೇಳದ ದನಿಯಲಿ ದನಿಗೂಡಿ.

೬ ಏತಕೆ ಸುಮ್ಮನೆ ಬಿದ್ದಿಹೆ ಜೀವವೆ
ಹರುಷದ ಹಾಡನು ಹಾಡೇಳು
ಮಾತಿಗೆ ಮೀರಿಹ ಮೋದವನೆದೆಯೊಳು
ತುಂಬುತ ಹರುಷದಿ ಹಾಡೇಳು.

# ನಿಟ್ಟುಸಿರು.

೧

ಯಾರಿವಳು, ಯಾರಿವಳು, ಸೌಂದರ್ಯಸಾಗರಳು
ಜವ್ವನದ ಭಾರಕ್ಕೆ ಬಾಗುತಿಹಳು ?
ಬಾರಯ್ಯ ! ಬಾರೆಂದು ಬೆಳದಿಂಗಳಿರುಳಿನಲಿ
ಯಾರನೋ ಕೈನೀಡಿ ಕರೆಯುತಿಹಳು !

೨

ಬಿಳಿಯ ಪತ್ತಲವುಟ್ಟು ಹೊಳೆವ ಕುಪ್ಪಸ ತೊಟ್ಟು
ವಿಶ್ವ ಮೋಹಿಸಿಯುಂತೆ ತೋರುತಿಹಳು
ಇಳಿಬಿಟ್ಟ ಕೇಶಗಳ ಬಣ್ಣಿಸುವುದೆನ್ನಳವೆ
ವನಲಕ್ಷ್ಮಿ ಬಂದಂತೆ ಕಾಣುತಿಹಳು.

೩

ತಿಂಗಳಿನ ತಂಬೆಳಕು ಎಲ್ಲೆಡೆಯು ಪಸರಿಸಿತು.
ವಿರಹಿಗಳ ಎದೆಯುರಿಯು ಹಿರಿದಾಯಿತು.
ತೆಂಗಿನಾ ಮರದಡಿಯು ರಮಣಿ ನೇರಿದಳಲ್ಲಿ
ಬಾಳುವೆಯ ಕೀರ್ತನವು ನೆನಪಾಯಿತು.

೪

ಹಾ ! ದೈವ! ಹಾ ದೈವ ! ದೈವಗೇಡಿಯ ದೈವ
ನನಗಾಗಿ ಹಾರಯಿಸಿ ಕುಳಿತಿರ್ದೆಯಾ ?
ಹದಿನಾರು ವರುಷದಾ ಹದಿಬದೆಯ ಜವ್ವನಕೆ
ಬೇಕೆಂದು ದೈವವೇ ನೀರೆರೆದೆಯಾ ?

೫

ನಾಲ್ಕುವರುಷದ ಕೂಸು ನಾನಾಗ ಕನ್ನಿಕೆಯು
ಮಾಂಗಲ್ಯ ಬಂಧನವು ಕೊನೆಗಂಡಿತು.
ಆಳ್ಕರಿನ ತಾಯ್ಗುರಳು ಜೋಡು ಕೂಡಿಸಿತೆನಗೆ
ಮರುವರುಷ ಪತಿಯಾತ್ಮ ಗತಿಗಂಡಿತು.

೬

ಪತಿಯಿರವ ನಾನರಿಯೆ ಪತಿಯೆಂದರೇನರಿಯೆ
ಮದುವೆಯಾ ಮಂಟಪವ ಕಂಡರಿಯೆನು
ಸತಿಯಾಗಿ ಗತಿಗೆಟ್ಟು ಪತಿತಳಾಗಿಹೆನಂತೆ
ಹದಿಬದೆಯ ಬಾಳುವೆಗೆ ಹೊರತಾಗಿಹೆ

೭

ನಾನರಿಯುದಾ ವರನು ನಾನು ಮೆಚ್ಚಿದ ವರನೆ?
ಅವನೊಡನೆ ಬಂಧನವು ಬಿಗಿಯುಪ್ಪುದೆ?
ಅವನಿತ್ತ ಮಾಂಗಲ್ಯಬಂಧನವು ಬಂಧನವೆ?
ಮೆಚ್ಚು ಹೆಚ್ಚಾಗಿರದೆ ದಾಂಪತ್ಯವೇ?

೮

ದೇವ ದೇವರದೇವ! ನಾನೆಂತು ಸಹಿಸಲ್ಕೆ?
ಜವ್ವನದ ಗತಿಯಿಂದ ಕಂಗೆಟ್ಟಿಹೆ.
ಸಾವನಪ್ಪುವೆನಿಂದೆ ರುಚಿಯಿಹುದೆ ಬಾಳಿನೊಳು
ಧರ್ಮದಾ ಕಟ್ಟಳೆಗೆ ತುತ್ತಾಗಿಹೆ.

೯

ಏತಕೀ ಲಾವಣ್ಯವೇತಕೀ ತನುಕಾಂತಿ
ನಾಯಿ ಕೇಳದ ಬಾಳು ಬದುಕಲೇನು?
ಕಾತರತೆ ಕರುಣೆಗಳ ತೆರೆದಿಟ್ಟ ಮಾನವರ
ಕಟ್ಟಳೆಯ ಮೆಟ್ಟಿದರೆ ಬರುವುದೇನು?

೧೦

ಮರುಕಗೇಡಿಗಳಾರೊ ಕಟ್ಟಳೆಯ ಕಟ್ಟಿದರೆ
ನೀತಿ ಪ್ರೀತಿಗಳೆಲ್ಲ ಹೊರದೂಡಬೇಕೆ?
ಹರುಷವೇನೆಲೆ ನಿಮಗೆ! ಹೆಣ್ಣುಗಳ ಕಣ್ಣೀರು
ನಿಮ್ಮೆದೆಯ ನೆತ್ತರದಿ ಬೆರೆಯಲಾಗಿ?

೧೧

ಇವಳ ಹಾಡನು ಕೇಳಿ ಮನಮರುಕಕೊಳಗಾಯ್ತು
ನಾ ನೋಡಿ ಪಡಿನೆಳಲ ಬೆಚ್ಚಿ ನಿಂತೆ.
ಇವಳ ಕೂಗನು ಕೇಳಿ ತನು ನವಿರಿಗೊಳಗಾಯ್ತು
ನಾನಾದೆ ಬಾಯ್ಬಿಗಿದ ಹುಚ್ಚನಂತೆ.

## ಸಹೋದರಿ.

ಮುದ್ದು ತಂಗಿ ಮೂರು ವರುಷ
ಪೂರ್ಣವಾಗಿ ಬಾಳಲಿಲ್ಲ;
ಸದ್ದು ಅಡಗಿ ಹೋಯಿತವಳ
ಚೆನ್ನ ಮುಖವು ಮಾಯವಾಯಿತು.

ಆಕೆಯೊಂದು ನೇಹದಿಂದ
ಆಕೆಯೊಂದು ನಲವಿನಿಂದ
ನಮ್ಮ ಮನೆಯು ಸಗ್ಗವಾಗಿ
ಹೊಮ್ಮಿ ಹರುಷ ಮೇರೆದಪ್ಪಿತು.

ನಾಲ್ಕುಮಂದಿ ಗಂಡುಮಕ್ಕ-
ಳವರ ಜತೆಗೆ ಒಬ್ಬಳೆಂದು
ಅಕ್ಕರಿಂದ ಅಮ್ಮನವಳ
ತವರಿನಲ್ಲಿ ಹೆಚ್ಚುಗೆಯ್ದಳು.

ಚಂಡುಹೂವ ಪಕಳೆಬಣ್ಣ
ದುಂಡಗಾದ ಅವಳ ಮುಖಕೆ
ದಂಡೆಯಿಟ್ಟು ಹೆಣೆದ ಹೆಳಲ
ಕಂಡು ನಾಗ ನಾಚುತಿದ್ದಿತು.

ಬಡವರಲ್ಲಿ ಹುಟ್ಟಿ ಬಂದೆ
ಹೊನ್ನಿನೊಡವೆ ತೊಡಿಸಲಿಲ್ಲ
ಪಡೆದ ಭಾಗ್ಯವಾವುದೆನುತ
ಅಮ್ಮ ಕಣ್ಣ ನೀರ ಕರೆವಳು.

ತಪ್ಪು ಹೆಜ್ಜೆಯಿಡುತ ಬಂದು
'ಹಪ್ಪ-ಆಬು-ಆ-ಬು' ಎನುತ
ಚಿಮ್ಮಿ ಬರುವ ಮಗಳ ಕಂಡು
ಅಮ್ಮ ಕಣ್ಣ ನೀರ ತೊರೆವಳು.

ಅಮ್ಮ ಹಬ್ಬ ಬಂದಿತೆಂದು
ಹೊನ್ನಿನೊಡವೆ ಬೇಡಿ ತಂದು
ಒಮ್ಮೆ ಎಲ್ಲವನ್ನು ತೊಡಿಸಿ
ಕಣ್ಣ ಹಬ್ಬ ಹಿಂಗಿತೆಂದಳು.

'ಚೆಲುವೆ ನೀನು ಮಗಳೆ 'ಶಾಕು'
ಕಟ್ಟಿ ಒಡನೆ ತೊಡಿಸಲೇಕೆ
ಹಲುಬಬೇಡ ಕಂದ, ಎಂದು
ದಿಟ್ಟಿಯನ್ನು ಮುರಿದು ಚೆಲ್ವಳು.

ತಾಯ ಪ್ರೇಮವೆನಿತು ಪಿರಿದೊ
ಎರಡು ವರುಷ ಜಾರಿ ಹೋಯ್ತು
ಮಾಯೆಯಿಂದ 'ಶಾಕು' ವನ್ನು
ಕರುಳ ನೀರನುಣಿಸಿ ನಲಿದಳು.

ಹೀಗೆ 'ಶಾಕು' ನಮ್ಮ ಮನೆಯ
ಮುದಕೆ ಮೊದಲು ಆಗುತಿರಲು
ಬೇಗೆಯೊಂದು ನಾಡಿನಲ್ಲಿ
ಬಿದಿಯ ಗೆಳೆಯನಾಗಿ ಬಂದಿತು.

ಗಂಟು ಬೇನೆಯೆಂಬ ಹೆಸರು
ಅಪ್ಪಿದವನು ತಪ್ಪಲಾರ
ನೆಂಟನಾಗಿ ಧರುಮನೊಡನೆ
ಬೆಪ್ಪನಾಗಿ ಒಪ್ಪು ಕೊಡುವನು.

ಯಾರು ಅತ್ತರೇನದಂತೆ
ಕರುಣೆಯೆಂಬುದಿಲ್ಲವಲ್ಲ!
ಯಾರ ಹರುಷ ಹರಿದರೇನು
ಮರುಕವೆಂಬುದರಿಯನಾತನು

ಕಣ್ಣನೀರನುಂಡು ತೇಗಿ
ಸಲೆ, ಮುರಿವ ದೋಷ ಹೊತ್ತು
ಹೆಣ್ಣ ಶಾಪ ಮಣ್ಣೊಳಿಟ್ಟ
ಬಲ್ಮೆಗಾರ ಧರ್ಮರಾಜನ

ಕರುಳಿನಲ್ಲಿ ಕರುಣೆ ತೊರೆಯು
ಬರತು ಹೋಗಿ ನಂಜು ಬಂದು
ತಿಳಿವಿನಲ್ಲಿ ಹರವಿಕೊಂಡು
ಬೀರುತಿಹುದು ತನ್ನ ಸೊಬಗನು.

ಬಾಳ ಕನಸು ಸವಿಯುತಿರಲಿ
ತಾಯಮಡಲಿನಲ್ಲಿ ಬರಲಿ
ಕೇಳಲಾರನೆಂಬುದನ್ನು
ಮಾಯಾವಂತರರಿಯದಿರುವಿರೆ ?

ಮೊಗ್ಗನರಿಯ ಪುಷ್ಪಬೇಕು
ಮಿಡಿಯ ಬಿಡನು ಕಾಯಿಯಹುದು
ತಡೆಯಲಾರ ಹಣ್ಣು ಬೇಕು
ತಗ್ಗು ತುಂಬಲಿಲ್ಲ ಒಡಲಿನ

ನನ್ನ ಮುದ್ದು ತಂಗಿಯವನ
ಕಣ್ಣೊಳುಲುಕುತಿತ್ತೊ ಏನೊ !
ಬನ್ನವನ್ನು ನನ್ನ ಮನೆಯ
ಕಣ್ಣಿನಿಂದ ನೋಡಲೆಂದನೊ!

ನಮ್ಮ ಮನೆಯ ಮುದವದೆಲ್ಲ
'ಶಾಕು' ವಲ್ಲಿ ರೂಪುಗೊಂಡು
ಅಮ್ಮನಿಂದ ನೀರನುಂಡು
ನೂಕುತಿತ್ತು ಕಾಡದನಿಯನು.

ಕಾಲನಿದನು ಸಹಿಸಲಿಲ್ಲ
ಕೊಂಚ ಸುಖವು ಮಿಂಚಿ ಹೋಯ್ತು.
ಶೂಲಪಾಣಿಗೇನು ಬಂತೊ
ಹೊಂಚುಹಾಕಿ ಕುಳಿತುಕೊಂಡನು

ಅಂದು ರಾತ್ರಿ ಕಡೆಯ ಯಾಮ
ದಲ್ಲಿ ದೇವ ಧರುಮರಾಯ
ಬಂದು ತಂಗಿಯನ್ನು ತನ್ನ
ಮಡಲಿನಲ್ಲಿ ಅಡಗಿಟ್ಟಿಸಿನು.

ಹೋಯ್ತು ಮುದವು ಅವಳ ಕೂಡ
ಮಾಯವಾಯ್ತು ಜೊನ್ನ, ಕತ್ತ
ಲಾಯ್ತು ಬಾಳ ಬಯಲು, ತಾಯಿ
ಬಾಯಬಿಟ್ಟು ಹಲಬುತಿರುವಳು ;

'ದೇವನೆಂತು ನ್ಯಾಯವಂತ
ನನ್ನ ಮುದ್ದು ಕಂದನನ್ನು
ಕಾವೆನೆಂದು ಕಳಿಸಿಕೊಟ್ಟು
ತನ್ನ ಕರಗಳಿಂದ ಹರಸಿದ

'ಧರೆಗೆ ಕಳುಹಿ ಮೂರುವರುಷ
ಪೂರ್ಣವಾಗಿ ತುಂಬಲಿಲ್ಲ
ಮುರಿದುಕೊಂಡ ದೇವನೆಂಬ
ಪೂರ್ಣವಂತ ತನ್ನ ವಚನವ.

ನನ್ನ ಕೂಸನೊಯ್ಯದಿರಲು
ಸಗ್ಗ ಕಳಚಿ ಬೀಳುತಿತ್ತೆ ?
ಮುಗ್ಗುತಿತ್ತೆ ತನ್ನ ಪದವಿ
ನನ್ನ ಕೂಸನೊಯ್ದನೇತಕೊ ?

‘ಕರುಣೆ ಯೆಂಬುದಿಲ್ಲವೇನೊ
ಬರಿಯ ಪೆಸರೊ ಕರುಣೆವಂತ
ಅರಿಯಲಿಲ್ಲವೇನೊ ಅವನು
ವಿರಹತಾಪವೆಂತು ಪಿರಿದು !

‘ಮಕ್ಕಳಿಲ್ಲವೇನೊ ‘ಅವಗೆ’
ಬಂಜೆಯೇನೊ ‘ಅವನ’ ಮಡದಿ
ಹೊಕ್ಕು ಬಿದಿಯು ಮುದ್ದು ಕೂಸ
ನೆತ್ತಿಕೊಳಲು ಬಿಕ್ಕಲಾರನೆ ?

‘ಅಯ್ಯೊ! ಕಂದ ಮುದ್ದು ‘ಶಾಕು’
ಕಣ್ಣು ತೆರೆದು ಒಮ್ಮೆ ನೋಡೆ !
ಅಯ್ಯೊ ! ಮಗುವೆ ಇಲ್ಲಿ ನೋಡೆ
ಅಣ್ಣ ಕಿರಿಯನೆಂತು ಅಳಲುವ

‘ಅಣ್ಣ ಬಂದನೆಂದು ಹಿಗ್ಗಿ
ನಲವಿನಿಂದ ನೆಗೆದು ನೆಗೆದು
ಕಣ್ಣ ಕುಣಿಸಿ ಓಡಿಬಂದು
ಹಲವು ನುಡಿದು ಅಪ್ಪಿಕೊಳ್ಳುವ.

‘ಮಗಳು ನೀನು ಅಣ್ಣಬರಲಿ
ಸುಮ್ಮನೇತಕಿರುವೆಯಮ್ಮ !
ಹಗಲು ಹೊತ್ತು ಆಟಕೆಂದು
‘ಸುಮ್ಮಿ’ ಬಂದು ಕರೆಯುತಿರುವಳು.

‘ಓಡು ಕಂದ ಆಡು ಹೋಗು
ಗೊಂಬೆಯಾಟ ಹೂಡು ಹೋಗು
ಕಾಡಿನಲ್ಲಿ ಸಿಡಿದು ಬಿದ್ದ
ರೆಂಬೆಯಂತೆ ಬಿದ್ದು ಬಿಡುವರೆ ?

'ನನ್ನ ಕಣ್ಣ ನೀರ ನೋಡಿ
ನಿನ್ನ ಪುಟ್ಟ ಕೈಯ ಚಾಚಿ
ಕೆನ್ನೆ ಸವರಿ ಮುಗುಳು ಬೀರಿ
ಕೆಳೆಯನೂರಿ ನಲಿಯುತಿರುತಿಹ

ಮುಗುಳನೊಂದು ಬೀರು ಮಗಳೆ
ತಾಯಕರುಳನರಳಿಸಮ್ಮ
ಬಿಗಿದುಕೊಂಡು ಕುಳಿತುದೇಕೆ
ಮಾಯೆ ನಿನಗೆ ಇರುವದಿಲ್ಲವೆ ?

ಉದಯದಲ್ಲಿ ಸಂಜೆಯಾಯ್ತೆ ?
ಬಾಳನರಿಯದವಳು ನಿನ್ನ
ಬಿದಿಯ ಆಳು ಸೆಳೆದುಕೊಂಡು
ದೂರವೊಯ್ದು ಹದನವಾವುದೊ !'

ಮಸಣವಾಯ್ತು ತಂಗಿಗಂದು
ಹೊಸತು ಹಸೆಯ ಮಂಚದಲ್ಲಿ
ಜಗದ ನಿಯಮವನ್ನು ನೀಗಿ
ದುಗುಡವೆಲ್ಲವನ್ನು ದಾಂಟುತೆ

'ಮೌನ ರಾಜ್ಯ ಪಟ್ಟದಲ್ಲಿ
ತಂಗಿ ರಾಣಿಯಾದಳಂದು
ತಾಣವಾಯ್ತು ಮಸಣದಲ್ಲಿ
ಹಿಂಗಿ ಬುವಿಯ ಕಳವಳಂಗಳ.

ಅತ್ತು ಅತ್ತು ತಾಯಿಯೀಗ
ಸತ್ತು ಸುಣ್ಣವಾಗುತಿಹಳು
ಮತ್ತೆ ಬಹಳೆ 'ಶಾಕು' ಎನಲು
ಕಣ್ಣ ನೀರು ಚಿಮ್ಮುತಿರುವವು.

ಅವಳ ಆಟ ನೋಟಗಳನು
ಅವಳ ಉಡಿಗೆ ತೊಡಿಗೆಗಳನು
ಕಂಡು ತಾಯಿ ಮರುಗಿ ಮರುಗಿ
ಬೆಂಡಿನಂತೆ ನವೆಯುತಿರುವಳು

'ಸುಮ್ಮಿ' ಬಂದು 'ಶಾಕು' ಎಲ್ಲಿ?
ಆಟಕೀಗ ವೇಳೆ,' ಎನಲು
ಅಮ್ಮನೇನು ಹೇಳಬೇಕು ?
ದೂರಮುಗಿಲ ತೋರುತಿರುವಳು.

ಮೋಹಜಾಲವೆಂತು ಪಿರಿದು !
ಮಾಯಗಾರ ನಾವನಿಹನೊ ?
ದಾಹವೇಕೆ ತಂಗಿ ಮಡಿಯೆ
ತಾಯಿಯೇಕೆ ಅಳಲುತಿರುವಳು

ತಿಳಿಯಲಾರೆವೆಲ್ಲ ನಾವು
ದೇವನೆಂಬ ಮಾಟಗಾರ-
ನಿಳೆಯ ಮರುಳು ಜನರ ಮುಂದೆ
ಮಾಡುತಿರುವ ಬೇರೆಯಾಟವ

ವರುಷವಾಗಿ ಹೋಯಿತೀಗ
ತಂಗಿಯನ್ನು ನೆನೆವರಿಲ್ಲ;
ಮರಳಿ ಮರಳಿ ತಾಯಿಯೊಬ್ಬ-
ಳವಳ ಹಬ್ಬದಲ್ಲಿ ನೆನೆವಳು.

# ಏಕೆ ?

ಎಳವೆಯನ್ನು ದಾಂಟಲಿಲ್ಲ, ಬಳವೆಯನ್ನು ಕಾಣಲಿಲ್ಲ,
ಬಾಳಕನಸು ಸವಿಯಲಿಲ್ಲ, ಬಾಲನಾಗಿ ಬದುಕಲಿಲ್ಲ.
ಇಳೆಯ ರಿಣವು ತೀರಿ ಹೋಯ್ತೆ? ಬರುವ ಸೊಬಗ ನೋಡಲಿಲ್ಲ;
ನೆಳೆದುಕೊಂಡನೇಕೆ ಜವನು ನನ್ನ ಮುದ್ದು ತಮ್ಮನ ?

# ಬಾಯ್ತೆರೆ ಭೂಮಿತಾಯಿ.

೧

ನೋಡಿದೆಡೆ, ಮಸಣದುರಿ ಮುಗಿದ ಮೇಲಿಡಿದ ಹೊಗೆ.
ಯುಸಿರಾಗೆ, ಬಾಳಿಳಿಯು ಮೈಸೋತು ನಡೆವ ಹೆಣ
ಗಳನೋಟ, ಹಸಿಹಸಿದು ಹಸಿವಾಗೆ ಹಸಿವನೇ
ತಿಂದಮೆಯ್, ನೀಗಿದಾಶೆಯು ಚೆಲ್ಲಿ ನಿಂತಿರುವ
ಕಣ್ಣುಗಳು, ಕಂಡವರ ಕೆಣಕುತಿಹ ಮುಖದಿರವು
ನೋಡಮ್ಮ ಭೂಮಿತಾಯಿ !

೨

ಕೇಳಿದೆಡೆ, ಕೇಳುವರ ಕಿವಿವೆರೆಗೆ ಬರೆಯಿಡುವ
ಚೀರುದನಿ, ಹಣದ ಸಿದಿಗೆಯು ಹಿಂದೆ ಹೆಣವು ಜೊ-
ಬ್ಬಿಡುತಿಹುದು. ಹೊರಬಿದ್ದ ಹೊಟ್ಟೆಯುರಿ ಗಂಟಲಿಗು
ಹೊರೆಯಾಯ್ತೆ ? ಬಿಟ್ಟ ಉಸುರಿನ ದನಿಯು ನಿಟ್ಟುಸುರಿ
ನಾಚೆಯದು, ಹಸಿದವರ ನರಬಡಿವ ಹೊಸನಾದ
ಕೇಳಮ್ಮ ಭೂಮಿತಾಯಿ !

೩

ಶಬ್ದಗಳು, ಬಾಳಬದುಕಿಸಲೆಂದು ಹವಣಿಸುವ
ನುಡಿಗಳವು, ಬರಿಯೊಡಲ ಭಾಂಡದಲಿ ಬಿರುಗಾಳಿ
ತುಂಬಿತಿಲೆ! ಒಳಹೊರಗು ಒರಿಬರಿದು ದನಿಯೊಂದೆ
ಕೇಡಕಟ ! ಬಯಲೊಡಲ ಬಯಕೆದನಿ ಬಯಲಾಚೆ
ಬಯಲಾಯ್ತು; ಬಾಂಬಯಲ ಗಡಿದಾಟಿ ಬಾನವರ
ಮೊಟುವದು ಭೂಮಿತಾಯಿ.

೪

ಅರಿಯುವೊಡೆ, ಜಾತಿ-ಮತ-ಪಂಥಗಳ ಕಾಲ್ತೊಡಕಿ
ನೆಳೆದಾಟ, ಮೂಢಧರ್ಮವ ನೆಚ್ಚಿ ನಿಂತವರ
ಹುಚ್ಚಾಟ, ಹಸಿದು ಹೆಂಡವ ಕುಡಿದು ತಲೆತಿರುಗಿ

ದವರಾಟ, ಹಸಿದವರಿಗೇನಕಟ? ಸುತ್ತಲೂ
ಗೋಳಾಟ, ಅರಿವಿಂಗೆ ನಿಲುಕದಿದೆ ಜಗದಾಟ
ತಿಳಿಯಮ್ಮ ಭೂಮಿತಾಯಿ.

೫

ಸಾಕಮ್ಮ! ನೋಡುವುದು ಕೇಳುವುದು ತಿಳಿಯುವುದು
ನೆಲದಾಯಿ, ಬೆದಕಿದಡೆ ಗೋಳಾಟ. ಬೆದಕಿ ಮಾ
ಡುವುದೇನು? ಹದಗೆಟ್ಟ ಜಗದಿರವ ಹಿಡಿತದಲಿ
ಹಿಡಿಯಮ್ಮ! ನಿನ್ನ ಬಸುರಲಿ ಬಂದು ಬೆಂದ ಜೀ
ವಿಗಳಮ್ಮ! ನಿನ್ನ ಗರ್ಭದ ನೋವು ನಿನಗಿಲ್ಲ
ವೇನಮ್ಮ ಭೂಮಿತಾಯಿ?

೬

ಮಿಸುಕಾಡು! ತೆರೆಮೆಯ್ಯ ತೆರೆದೊಡಲ ತೆರೆವಾಯ
ಜೀವಿಗಳು, ಬಿರುಗಣ್ಣ ಬಿಡುತಿಹುದ ಕಣ್ದೆರೆದು
ಕಾಣೆಯಮ್ಮ; ದಾನವರ ಬಾಳಿನಲಿ ಮಾನವರ
ಮರೆಯುವುದೆ? ನಿನ್ನ ಮಕ್ಕಳ ಕರೆದು ಸಂತಯಿಸ
ಬೇಕಮ್ಮ! ಗತಿಯದುವೆ ತಾಯಮ್ಮ. ಇಲ್ಲದಿರೆ....
ಎಲೆ ತಾಯಿ! ಭೂಮಿತಾಯಿ!—

೭

ಇಲ್ಲದಿರೆ, ಕೋಟಿ ಜಗಗಳನೊಂದೆತುತ್ತಿನಲಿ
ಕಬಳಿಸಲು ಬಾನುದ್ದ ಬಾಯತೆರೆ; ಬೆಂದವರ
ನೊಂದವರ ಇದ್ದವರ ಬಿದ್ದವರನೆಲ್ಲರನು
ನುಂಗಿಬಿಡು; ಜಗದನೆಲೆ ಸಿಗದಂತೆ ಮಾಡಿಬಿಡು.
ಬಾಯತೆರೆ; ತೆರೆಯದಿರೆ ನಿನ್ನೊಡಲ ಬಗಿದೇನು!
ಬಾಯತೆರೆ ಭೂಮಿತಾಯಿ!

## ಪಸುಳೆ

೧

ಏನೆನ್ನ ಮುದ್ದುಮೊಗ
ವೇನೆನ್ನ ನುಣ್ಗದಪೊ ?
ನಲವಿನಾ ನೆಲೆವನೆಯು
ತಿಳಿಯದಾಗಿಹುದೆನಗೆ.

೨

ಪಸುಳೆಗಳು ನಾವಂತೆ
ಚುಂಬನವು ಸವಿಯಂತೆ
ಹಸುಗೂಸು ಅತ್ತರೂ
ಕಂಬನಿಯು ನಲವಂತೆ.

೩

ಕಬ್ಬಿಗರ ಕವನಕ್ಕೆ
ಹೊಸಹೊಳಪು ನಾವಂತೆ
ಹಬ್ಬವಾಗುವದಂತೆ
ರಸಿಕರಾ ಕಂಗಳಿಗೆ.

೪

ಕಾಲನೊಡ್ಡಿದ ಬಲೆಯು
ಬಿತ್ತರದ ಬಯಲಿನಲಿ
ಬಾಲಕರು ಹರುಷವನು
ಬಿತ್ತಿ ಬಾಳುವರಂತೆ

೫

ಸಗ್ಗಲೋಕದ ಬೀದಿ
ಹಿರಿಯರಿಗೆ ನಾವಂತೆ
ಬಿದ್ದಬಾಳೆಬ್ಬಿಸುವ
ಗಂಡುಗಳು ನಾವಂತೆ.

೬

ಚೆಲುವಿರಲಿ ಒಲವಿರಲಿ
ದೂರಿರಲಿ ಕಾಮುಕರು
ಎಳೆದೊಗಲ ತನಿವಣ್ಣ
ಸೂರೆಗೆಯ್ಯುವರೇಕೊ!

೭

ಕದಪಿನಲಿ ಪ್ರೇಮವೊ?
ಪ್ರೇಮವೇ ನುಣ್ಗದಪೊ?
ಹದನಾವುದಕಟಕಟ!
ಕಾಮಪಿತನುಸುರಯ್ಯ.

# ನರಕ

೧

ನರಕದ ಭೀತಿಯುದೇಕಣ್ಣ
ನರಕವು ಕಲ್ಪನೆ ಕಾಣಣ್ಣ
ಪಾಪ ಕರ್ಮಗಳ
ಕೂಪದೊಳಳಿಯಲು
ಮಾನವರಂಜಲಿಕೆಂದಣ್ಣ
ನರಕದ ಹಿಂಸೆಯ ಕತೆಯಣ್ಣ.

೨

ನರಕವ ಕಂಡವರಾರಣ್ಣ
ನಾಕದಿ ಬಂದವರಾರಣ್ಣ
ಚಿತ್ರಗುಪ್ತರನು
ದೇವ ದೂತರನು
ಕಾಣುವೆವೆನ್ನುವುದೇಕಣ್ಣ
ಕಂಡವರುಂಟೇ ಹೇಳಣ್ಣ.

೩

ಸತ್ತವನಾತ್ಮನದೇನಣ್ಣ
ಮತ್ತಿಳೆಗಿಳಿಯುವ ಉಸಿರಣ್ಣ
ಸತ್ತವರೆಲ್ಲರು
ಅತ್ತಲೆ ನಿಂತರೆ
ಭೂಮಿಗೆ ಬರುತಿಹರಾರಣ್ಣ
ನಾಕ-ನರಕಗಳು ತೆರವಣ್ಣ

೪

ಸಾವಿನ ಸಂಕಟವೇಳುತಿರೆ
ನರಕದ ಯಾತನೆ ಬೇಡಣ್ಣ

ವೇದನೆಯೆಂಬುದು
ಬಾಧಿಸಿತೆಂದರೆ
ಹತ್ತಿರ ನರಕವು ಬಂತಣ್ಣ
ಸತ್ತರು ಕೇಳದೆ ಬಹುದಣ್ಣ

೫

ಕಲ್ಪನೆ ನರಕವದೇಕಣ್ಣ
ಕಾಲಲಿ ಸುತ್ತಿಹುದೇಳಣ್ಣ
ಮುಂದಿನ ಹರಗಣ
ವಿಂದೇತಕೆ ತೆಗೆ
ಸಾವಿನ ಮಂದಿರ ಹೊಕ್ಕವರು
ಸತ್ತಿಹ ಕತೆಯನು ಹೇಳುವರೆ?

೬

ತೃಪ್ತಿಯು ಕಾಣದ ಎದೆಯಲ್ಲಿ
ನರಕದ ವಾಸವು ಸ್ಥಿರವಲ್ಲಿ
ಕರುಳನು ಕೊಯ್ಯುವ
ಮರುಳನ ಮಾಡುವ
ಕುಹಕರ ಹೃದಯದಲಿಹುದಣ್ಣ
ನರಕದ ಭೀಕರ ರೂಪಣ್ಣ.

೭

ನೀತಿಯು ಕಜ್ಜವನೆಸಗದರ
ಖ್ಯಾತಿಗೆ ಬಾಯನು ಬಿಟ್ಟವರ
ಹೆಣ್ಣನು ದೂಡುವ
ಮಣ್ಣನು ಬೇಡುವ
ಮನದಲಿ ನರಕಕೆ ಎಡೆಯುಂಟು
ಹಣದಲಿ ನರಕವು ಮೊದಲುಂಟು.

೮

ನರಕಾ ! ನರಕಾ! ನರಕಂತೆ!
ನರಕದ ಭೀತಿಯುದೆನಗಂತೆ
ಸಾವಿನ ಮಾರ್ಗದಿ
ದೇವನ ಕಾಣುವೆ
ನೆಂಬುವಗುಂಟೇ ನರಕವಿದು ?
ಪುರಾಣ ಕಟ್ಟಿದ ನರಕವದು ?

೯

ಸತ್ಯದ ತೆರೆಗಳ ಮೇಲಣ್ಣ
ತೇಲುತಲಿಹುದೀ ಜಗವಣ್ಣ
ಬಿತ್ತರ ಜಗದಲಿ
ಸತ್ಯವು ಸಾಯದು,
ಸತ್ತರೆ ಜಗವೇ ನರಕಣ್ಣ
ಸತ್ಯವೆ ಸ್ವರ್ಗವು ಅರಿಯಣ್ಣ.

# ತೊದಲ್ನುಡಿ.

೧ ಅಮ್ಮಾ ಎನ್ನುವ ಕೂಗನು ಕೇಳಲು
ತಮ್ಮಾ ಎನ್ನುತ ತಾಯಿಯು ಜೀವವು
ಕಂದನಿಗೊಲವಿನ ಮುತ್ತನು ತೂರುತ
ಬಂದಿತು ಬೇಗದಿ ಮಾತನು ಕೇಳಲು.

೨ ದೇಗುಲದೊಳಗೇ ದೇವನ ಕಾಣಲು
ಪೋಗಲು ನಿತ್ಯವು ಹೇಳುವೆಯೇತಕೆ ?
ವಿಶ್ವದೊಳೆಲ್ಲೆಡೆ ತುಂಬಿಹನೆನ್ನುತ
ಹೇಳುವ ಮಾತೊಳು ಹುರುಳೇ ಇಲ್ಲವೆ ?

೩ ಮೋಡದ ಮರೆಯೊಳು ಕೊಳಲನ್ನೂದುತ
ನೃತ್ಯವನೆಸಗುವ ದೇವನದೊಂದು
ಕಾಡಿನ ಕಲ್ಲಿನ ಪ್ರತಿಮೆಯು ಕೆತ್ತಿ
ಗೂಡೊಳಗಿಟ್ಟರೆ ಆಗುವುದೇನು ?

೪ ಮೂಡಣ ದಿಕ್ಕಿನ ಚುಕ್ಕಿಯದೊಂದು
ದೇವನಿಗಾರತಿ ಬೆಳಗುತ ಸಾಗಿರೆ
ಮೋಡಗಳೆಲ್ಲವು ಮಳೆಯನು ಕರೆದು
ದೇವನ ರೂಪವ ತೊಳೆಯುತಲಿರಲು.

೫ ಕರ್ಪುರದಾರತಿ ಬೆಳಗುವರಮ್ಮ !
ಕೇಶರನೀರಲಿ ತೊಳೆಯುವರಮ್ಮ !
ಕಲ್ಲಿನ ದೇವರ ನೆನೆಯುವರಮ್ಮ !
ಚಿನ್ನದ ಉಡುಗರೆ ತೊಡಿಸುವರಮ್ಮ !

೬ ಜಗವನು ಮಾಡಿದ ದೇವದೇವಗೆ
ಚಿನ್ನದ ಒಡವೆಯ ಹಂಬಲವೇಕೊ ?
ಭೂಮಿಯ ಜನರಿಗೆ ಅನ್ನವನೀಯುವ
ಚಿನ್ಮಯ ರೂಪಕೆ ಬಡತನವೇಕೊ ?

# ಹೊಸನಾತ.

೧

ಹೊಸನಾತ! ಹೊಸನಾತ! ಹೊಸನಾತವೆಂದು
ಹಸಿದ ಹೆಬ್ಬುಲಿತಾಯಿ ಕಣ್ಣರಳಿ ನಿಂದು
ತೆರೆದೊಡಲ ಕೊರೆತಕ್ಕೆ ಬರಿನೆಲವ ಕೆದರಿ
ದಣಿವಾಯ್ತು ನೋಡೆಂಬ ಬಿರುಗಣ್ಣ ತೋರಿ
ಬಯಲನೆಕ್ಕುವ ಗಂಡು ಮಕ್ಕಳನು ಕಂಡು
ಹಸಿದ ಹೆಬ್ಬುಲಿತಾಯಿ ಕಸಿವಿಸಿಯನುಂಡು
ಹೊಸನಾತವೆಲ್ಲಿಂದ
ಹೊಸಹೊಸತು ಬಂತೆಂದು
ಹಸಿದೊಡಲ ಹಿಂಗಿಸಲು ಹೊರಬಿದ್ದಳು ;
ನೆಲದಂಚ ಮೂಸುತ್ತ ನಡೆದಿದ್ದಳು.

೨

ಸುತ್ತಿದಳು ಬಯಲನ್ನೆ ಒಡಲಾಶೆ ಮೀರಿ
ಹತ್ತಿರುವ ಹೊಸನಾತಕೆಲ್ಲಿಹುದು ದಾರಿ
ದಶದಿಕ್ಕು ಸುತ್ತಿದರು ಬಿಸಿನೆತ್ತರೆಲ್ಲಿ ?
ಹೊಸನಾತ ಹತ್ತಿದರು ಹೊಸಬೇಟೆಯೆಲ್ಲಿ ?
ಹಸಿದಮಕ್ಕಳ ಹಿಂಡು ಹಿಂಡೆಲ್ಲ ಹಿಂದು
ಹಸಿವೆ ರೂಪವ ತಾಳಿ ನಿಂತಂತೆ ಮುಂದು
ಅರಚುತ್ತ ಕಿರಿಚುತ್ತ
ತೆರೆದೊಡಲ ತೋರುತ್ತ
ಹೊಸನಾತ ಹೊಸಬೇಟೆ ಎನ್ನುತಿರಲು
ಹಸಿವಮ್ಮ ಹಸಿವೆಂದು ಕೂಗುತಿರಲು

೩

ಹಸಿದ ಹೆಬ್ಬುಲಿತಾಯಿ ಕಂಗೆಟ್ಟಳಂದು
ಹಸಿದ ಮಕ್ಕಳಕೂಗು ಕಿವಿದೆರೆಗೆ ಬಂದು

"ಹೊಸಬೇಟೆ ಎಲ್ಲಿಹುದು" ಹೊಸನಾತವೊಂದು
ಹಸಿದೊಡಲ ಕೆರಳಿಸುತ ಹೊರಟಿಹುದದಿಂದು
ಹೊಸನಾತದಿಂದೇನು ಹಿಂಗುವುದೆ ಹಸಿವು?
ಕೂಳೆಲ್ಲಿ? ಕೂಳೆಲ್ಲಿ? ವಾಸನೆಯೆ ಹುಸಿಯು
ಕೂಳು ಕೊತ್ತಳದಲ್ಲಿ
ಕೊಳೆಬಿದ್ದ ಬಳಿಕಿಲ್ಲಿ
ಕಸಿವಿಸಿಯನೆಬ್ಬಿಸಲು ಹೊಸನಾತವು;
ಹೊಸದಾಗಿ ಬಂತಕಟ! ಹುಸಿಗಾಳಿಯು."

೪

ಹುಸಿಗಂಪ ಕುಡಿಕುಡಿದು ನೆಲದಂಚಮೂಸಿ
ಹಸಿವಾರಲಿಲ್ಲೆಂದು ಹಸಿದೊಡಲ ರೋಷಿ
ನೆಲಬಡಿದು ನಿಂತಿರುವ ಮಕ್ಕಳನು ನೋಡಿ
ಬಲಗಾಲನೆತ್ತಿದಳು ದೂಳನ್ನು ದೂಡಿ.
ಹೊಸನಾತಕಾಗಿಯೇ ನೆಲದಂಚನೇಕೆ
ಮೂಸುವಿರಿ ಮಕ್ಕಳಿರ! ಹೊಸನಾತ ಸಾಕೆ?
ಹೊಸಗಂಪಿನಿಂದೇನು?
ಹೊಸಬೇಟೆ ಬೇಕೆಂದು
ಹಸಿದ ಮಕ್ಕಳ ಕರೆದು ಸಿಡಿದೆದ್ದಳು;
ಹುಸಿಬದುಕು ಸಾಕೆಂದು ಹೊಸೆದೆದ್ದಳು.

೫

ತೆರವಾಯು ಮಕ್ಕಳನು ಹತ್ತಿರಕೆ ಕೂಗಿ
ತೆರೆದುಗುರ ತೋರಿದಳು ಹಸಿದೊಡಲ ತೂಗಿ
ಬಿಸಿಲುಗುದುರೆಯನೇರಿ ಮರೆಯದಿರಿ ನೀವು
ಹೊಸನಾತ ಮದವೇರಲೊಡನದುವೆ ಸಾವು
ಹಸಿದುಸಿರ ಝುಳಕಿಂದು ಹೊಸನಾತ ಕೊಚ್ಚಿ
ದೆಶೆಯಾಚೆ ಬೀಸುತಿಹ ಗಾಳಿಯನು ಮೆಚ್ಚಿ
ಬಯಲಲ್ಲಿ ಬಯಲಾಗಿ
ಹವೆಯಲ್ಲಿ ಹವೆಯಾಗಿ
ಹೋದಂದೆ ನಮಗಿಲ್ಲ ಹೊಸಬೇಟೆಯು
ಹೊಸನಾತ! ಹೊಸನಾತ! ಹೊಸನಾತವು.

# ಗಾಂಧೀಜಿ.

೧

ಅರೆಹೊಟ್ಟೆ ಹಸಿವವರ ಎದೆಯುರಸ ಬಾರಯ್ಯ.
ಬರವ ಹಾರಯಿಸಿರುವ ತಾಯ್ನಾಡಿಗೆ;
ಹಿರಿಯಾಳು ಭಾರತಿಯ ಹುರಿಯಾಳು ಬಾರಯ್ಯ.
ಬರವ ಹಾರಯಿಸಿರುವ ತಾಯ್ನಾಡಿಗೆ.

೨

ಗುಂಡು ಮೇಜಿನ ಮೇಲೆ ಮುಕುಟ ಮಂಡಿತರೆಷ್ಟು
ಮೊಂಡೆಯೂರಿದರಯ್ಯ ಕೊಂಡಾಡುತ;
ಗುಂಡು ನಿಲ್ಲುವುದುಂಟೆ? ಶೂನ್ಯ ಸಾಧಿವರುಂಟೆ?
ಕಂಡಿರುಳ ಕನಸೊಂದು ದಿಟವಾದುದೆ?

೩

ಅರಿತದ್ದನರಿಯಲ್ಕೆ ನೀವೋದುದೇಕಯ್ಯ
ಮರುಳತನ ಮುದುಕಂಗೆ ಮನೆಮಾಡಿತೆ?
ಅರಿರಾಯರೆಂದಾರೆ ನಾಡನೀಯುವುದುಂಟೆ?
ಹುರಿಗಾಳನರೆಯಿದೆಲೆ ಪುಡಿದೊರೆವುದೆ?

೪

ಹಂಬಲದ ಸಾಗರದಿ ಭರವಸೆಯ ನೌಕೆಯನು
ಬೆಂಬಲಿಗನಾಗಿ ನೀ ನೂಕಿದೆಲ್ಲ!;
ಹಂಬಲವು ಹಳಸಿತೇ? ತಾ ಬಂಡೆ ಕೂಟದಲಿ
ಇಂಬಿಲ್ಲ ಭಾರತಿಗೆ ಪೋಗೆಂದರೆ?

೫

ಕಡಲೊಡತಿ ಕೆಡುಗಾಲ ತೋಡಿದಳು ತಾನಾಗಿ
ತಡವಿದಳು ತವಸಿಯೇ ನಿನ್ನನಿಂದು;
ಬಿಡುಗಡೆಯ ನೀಡೆಂದು ನೀಪೋದುದಲ್ಲಯ್ಯ
ಪಡೆವ ಹಕ್ಕಿಹುದೆಂದು ಸಾರಿದೆಯ್ಯ.

೬

ಸಾಗರವ ದಾಟಿದ್ದೈ ಶಾಂತತೆಯ ಸಾಧಿಸಲು
ತ್ಯಾಗವೀರರ ವೀರ! ಏನೆಂಬೆನು ;
ಸಾಗರದ ಸನಿಯರಿಗೆ ಕೊಳಗುಳವೆ ರುಚಿಸಿತೇ?
ಭೋಗಾತ್ಮರವರಯ್ಯ ಹಮ್ಮಿನವರು.

೭

ಪುಡಿಯಲ್ಲಿ ಹೊರಳಿಹರು ನಾಡೊಡೆಯರಿವರೆಲ್ಲ
ಕಡೆಗೆಲ್ಲಿ ಕಾಣ್ಬರೋ ಶಾಂತಿಯನ್ನು!
ಹಿಡಿಯಲ್ಲಿ ಮಡಗಿಹುದು ನವಖಂಡ ಪೃಥ್ವಿಯಿದು
ನಡೆಯಯ್ಯ ಭಾರತಿಯ ಮುದ್ದಿನಣುಗ.

೮

ಹೀನದೀನರ ದೇವ! ಸತ್ಯತೆಯ ಮೂರ್ತಿಯೇ
ನೋಡದೋ! ನೋಡಲ್ಲಿ ನಾಡಿನಲ್ಲಿ.
ಕಾಣುತಿದೆ ನಡುವಗಲ ಮಾರ್ತಾಂಡಮಂದಿರದ
ತಾಣವದು ಭಾರತಿಯ ತೋಟದಲ್ಲಿ

೯

ಪ್ರೇಮತೊರೆ ಹರಿಯುತಿರೆ ಹೊನಲಾಗಿ ಭಾರತದಿ
ಕಾಮಿಗಳು ಕೆಡಿಸಿದರು ವಾಹಿನಿಯನು;
ಪ್ರೇಮಮಯ ಜೀವನನೆ ಬಾರಯ್ಯ ಬಾ ಬೇಗ
ಕಾಮಪಿತನರಿಯನೇ ನಿನ್ನಳವನು.

೧೦

ರಣಗಾಳಿ ಬೀಸುತಿದೆ! ರಣಕೊಂಬು ನುಡಿಯುತಿದೆ
ರಣರಂಗ ತೀವಿಹುದು ಸೇನೆಯಿಂದ
ರಣದೊಡೆಯ ಬಾರೈ ಅಜೇಯ ವೀರರ ವೀರ!
ಕಣದಲ್ಲಿ ಜಯಮಾಲೆ ನಿನ್ನದಿನ್ನು.

# ಪುಣ್ಯಸ್ಮರಣೆ.

(ದಿವಂಗತ ಕೌಜಲಗಿ ಹಣಮಂತರಾಯರನ್ನು ನೆನೆದು)

ಹೃದಯಗಂಗೆಯ ನೊರೆಯ ನೂಲಿನಲಿ ನೇದಂತೆ
ಜೀವನದ ಧವಲತೆಯೆ ಮೈವೆತ್ತು ಬಂದಂತೆ
ನಿಡುದೇಹಕೆಡಿದಾಗಿ ನಿಡಿದಾದ ನಿಲುವಂಗಿ;
ನಿತ್ಯ ಜೀವನದಲ್ಲಿ ಸತ್ಯಸಾಧನೆಗೆಯ್ದ
ಸಾತ್ತ್ವಿಕದ ಮುಖಮುದ್ರೆ. ಸರಳತೆಗೆ ಸರಳತೆಯ
ಪಾಠ ಕಲಿಸುವ ರೀತಿ. ಬಾಳ ಹಂದರದಲ್ಲಿ
ಕಟು-ಮಧುರ ಸಂಗೀತ—ಸಾಹಿತ್ಯ ಕೇಳಿಯಲಿ
ನಗೆಯ ಹೊಗೆ ತೇಲಿಸುತ ಬಗೆಯ ತಿದ್ದುವ ರೀತಿ.
ಜೀವನದ ಕಲಹದಲಿ ಬಾಳು ಬೇಗುದಿಗೊಂಡು
ನೋವು ಸಾವುಗಳಲ್ಲಿ ತಾಯ್ನಾಡು ಕುದಿಯುತಿರೆ
ಧೀರ ನಾಯಕನಂತೆ ಗಂಭೀರ ವಾಣಿಯಲಿ
ವರದ ಹಸ್ತವನಿತ್ತ ನಿನ್ನ, ಕನ್ನಡನಾಡು
ಮರೆಯದೆಂದೆಂದಿಗೂ; ಸತ್ತನೆಂಬರೆ ನಿನ್ನ?
ಸತ್ತನೆಂಬುವ ಮಾತೆ ಸತ್ತು ನಿಲ್ಲುವುದಯ್ಯ
ಮಡಿದರೂ ಮಡಿಯದಿಹ ಅಮರ ಜೀವಿಯು ನೀನು.
ಮರಣವಮರರಿಗೆಲ್ಲಿ?

## ತಳಮಳ.

೧

ಸುತ್ತುಮುತ್ತಲೂ
ಕತ್ತಲೆ ಮೊತ್ತವೆ
ಚಿತ್ರವಾಗಿದೆ
ಜಗದೊಳಗೆಲ್ಲಾ
ಕೊಳ್ಳಿದೆವ್ವಗಳು
ಪಂಜನು ಹಿಡಿದು
ಜಗದ ಕಣಜಕೆ
ಬೆಂಕಿಯನಿಟ್ಟು
ಎತ್ತಲೆತ್ತಲೂ
ಕೊಳ್ಳಿಯ ಕೊಟ್ಟು
ಧಗಧಗ ಉರಿಯುವ
ಬೆಂಕಿಯ ಮುಂದೆ
ತಾಂಡವ ನೃತ್ಯವ
ನೆಸಗುತಲಿಹವು.

೨

ಹೊತ್ತಿತು! ಹೊತ್ತಿತು!
ಹೊತ್ತಿತು ಬೆಂಕಿ
ಜಗದ ಬಣವಿಗೆ
ಹತ್ತಿತು ಬೆಂಕಿ
ಅಗ್ನಿದೇವಗೆ
ದಯವೆಲ್ಲಿಹುದು?
ಬಡವರ ಒಡಲಿನ
ಸೂಡನು ಸುಟ್ಟು

ದೈವುಳ್ಳವರನು
ದೈವಕೆ ಕೊಟ್ಟು
ಇದ್ದುದನೆಲ್ಲಾ
ಬಾಯೊಳಗಿಟ್ಟು
ತೇಗುತಲಿಹನು
ಹಸಿವೆಯನೀಗಿ.

೩

ಏನಿದು ! ಏನಿದು ?
ಎಲ್ಲಿಯು ಕತ್ತಲೆ
ಜಗವನ್ನೆಲ್ಲಾ
ಮುತ್ತಿಹುದಕಟ !
ಹೊತ್ತಿನ ದೊರೆಯು
ಮತ್ತೆ ಬಾರನೆ ?
ಬೆಳಕೆಂಬುವುದು
ಧಾತ್ರಿಗೆ ಕನಸೋ ?
ಬ್ರಹ್ಮಾಂಡವು ತಾ
ತಿರುಗದ ಗುಂಡೊ ?
ಕೆಂಡದ ಕುಣಿಯೊ
ಜಗವೆಂಬುವುದು ?
ಸೊಂದಿಸುವವರು
ಯಾರಿಲ್ಲೆ ? ಯಾರಿಲ್ಲೆ ?

೪

ನಂಜುಂಡನು ತಾ
ನಂಜನು ತಿಂದು
ಸ್ಮೃತಿಯೆಂಬುದನು
ಕಳಕೊಂಡಿಹನೊ ?

ಕರುಣೆಯು ಬಾರದೆ
ಸರಸತಿಯಾಣ್ಮಗೆ ?
ತಲೆಚಿಟ್ಟಾಯ್ತೇ
ವೇದವನೋದಿ ?
ಮಂಕು ಬಡಿಯಿತೊ
ಸುರಗಣಕೆಲ್ಲ ?
ಹುಚ್ಚೆದ್ದೋಡಿತೊ
ಸಗ್ಗಿಗರಾಳ ?

೫

ಅಳಲುರಿಯೆದ್ದು
ಒಡಲೊಳಗೆಲ್ಲಾ
ದಹಿಸುತ್ತಿಹುದು
ದೇಹವನೆಲ್ಲಾ
ತಳಮಳವೆದ್ದು
ಬಳಲುತ್ತಿಹೆನು
ನೆತ್ತರವೆಲ್ಲಾ
ಬತ್ತಿಹುದೇನೊ ?
ಇತ್ತುದನೆಲ್ಲಾ
ತೆತ್ತಿಹರೇನೊ ?
ಕಿರಿಚುವ ದನಿಯು
ಅರಚುವ ಸರವ
ಕೇಳೀ ಕೇಳಿಯು
ನಿಮ್ಮಯ ಕಲ್ಲೆದೆ
ಕರುಣವ ಸೂಸದೊ ?

# ಕೂಸಿನ ಮಾತು

೧

ನೇಸರನು ಬೇಸರಿದು ತಾಯ್ಮಡಲನರಸುತಲಿ
ಕೆಂಧೂಳಿ ಚೆಲ್ಲುತಿರಲು;
ಸಾಸಿರದ ಹಕ್ಕಿಗಳು ಚಿಲಿಪಿಲಿಯ ಸುಖದಲ್ಲಿ
ಮಗುವನ್ನು ಕೆರಳುತಿರಲು;

೨

ಹೇಳಬಾರೆಲೆ ಹಕ್ಕಿ! ನಿನಗೆ ಜನುಮವನಿತ್ತ
ಮಾದೇವನೆಲ್ಲಿರುವನು?
ಕೇಳಬಯಸುವೆನವನ ನಿನ್ನ ಜನುಮದ ಸುಖವ
ನೇತಕೆನಗೀಯಲಿಲ್ಲ?

೩

ಹಾರಿಯಾಡುವೆ ನೀನು ಹರುಷ ನಿರ್ಭರದಿಂದೆ
ನನಗೆಲ್ಲಿ? ಆ ಹರುಷವು.
ಬಾರಿ ಬಾರಿಗೂ ನಿನ್ನ ತಡೆಯಿಲ್ಲದಿಹ ಬಾಳ
ನೆನೆಯುತಲಿ ಬೇಯುತಿಹೆನು.

೪

ಪೊಕ್ಕುಳಿಯೆ ಬಾಯಿಲ್ಲಿ; ಗಿಣಿರಾಮ ನೀ ಬಾರೊ!
ಹೊನ್ನಕ್ಕಿ ಮರೆಯಬೇಡ.
ರೆಕ್ಕೆವಂತರೆ ಬನ್ನಿ! ನನಗೆ ಮುದವನು ತನ್ನಿ
ಬಿನ್ನಯಿಪೆ, ನಿಮಗೆ ಬಾಗಿ

೫

ನೋಡಲ್ಲಿ! ನನ್ನಮ್ಮ! ಹಸರು ಸೀರೆಯ ರಮಣಿ
ಹಾಡಿ ಕುಣಿಕುಣಿಯುತಿಹಳು.
ಬೇಡ ಮುಗಿನೆನ್ನವರು ಯಾರಿಹರು ಹೇಳಮ್ಮ
ಪಾಡುವಳು ಬೇಸರಿಲ್ಲ.

೬

ನಿನ್ನೆ ಹೇಳಿದೆಯಮ್ಮ ನನಗೆ ಜನುಮವನಿತ್ತ
ದೊರೆಯವರ ತಂದೆಯೆಂದು ;
ನನ್ನ ಬಾಳೀರೀತಿ ಪಕ್ಷಿಗಳದಾರೀತಿ
ಯೇಕಮ್ಮ ಬಗೆದನವನು ?

೭

ದೇವನೊಂಬುವನೊಬ್ಬನೀತೆರದಿ ಮಾಡಿದರೆ
ಚೆಂದವೇ ಲೋಕದಲ್ಲಿ ?
ಸಾವ ಬೇಡುವೆನಿಂದೆ ಆ ಬಾಳನೀಯುವೊಡೆ
ಮುಂದೆ ಬಹ ಜನ್ಮದಲ್ಲಿ

# ಬೆಂದೊಡಲ ಬಿಸಿಯುಸಿರು

೧

ಸುಡು ಸುಡಲಿ ! ಸುಡು ಜೀವ
ಸುಡುಗಾಡ ಸೇರೇಳು
ಹುಡುಕದಿರು ಸಂತಸವ ಬಾಳಿನಲ್ಲಿ,
ತಡೆಯಿಹುದು ನಿನಗಿಂದು ಧರ್ಮದಲ್ಲಿ
ಒಡೆಯನಿರೆ ಮರೆಯಾಗಿ
ಹಡೆದವರು ಹೊರತಾಗಿ
ಕಡೆಗಾಲವೆಂದೆನುತ ಕೇಳುತಿಹರು,
ಬಿಡುಗಡೆಯು ನೆನೆಯೆಂದೆ ಹೇಳುತಿಹರು.

೨

ಮದುವೆಯಾಗಿತ್ತಂತೆ
ವಿಧವೆಯಾಗಿಹೆನಂತೆ
ಅದಕಾಗಿ ನಾನಿಂದು ಸಾಯಬೇಕು;
ಬಿದಿಗಾಗಿ ನಾನಿಂದು ಮರುಗಬೇಕು
ಮದುವೆಯಾಗಿಹುದೆಂದು
ವಿಧವೆಯಾಗಿಹೆನೆಲೇ !
ಸದಮಲರೆ ನಾನರಿತೆ, ಯಾರತಪ್ಪು ?
ಬಿದಿಗಾಗಿ ದೂರುವದು ಯಾರಿಗೊಪ್ಪು ?

೩

ನನ್ನನೇ ತಿಳಿಯದಿಹ
ಕಂದಮ್ಮ ನಾನಂದು
ನನ್ನ ಜನ್ಮದ ಜೋಡ ತಿಳಿವೆನೆಂತು ?
ನನ್ನೊಡೆಯನಿವನೆಂದು ಕರೆವೆನೆಂತು ?
ನನ್ನರಿವು ತಿಳಿದಾಗ
ನನ್ನ ಜೀವನದಲ್ಲಿ
ತನ್ನ ಸೊಬಗನ್ನಿಡುವ ನಲ್ಲನೆಲ್ಲಿ ?
ತನ್ನ ಬಾಳನು ಮುಗಿಸಿ ಮಸಣದಲ್ಲಿ.

೪

ಇಂದು ಆರ್ಯರ ಬೆಳಕು
ಹಿಂದುಧರ್ಮದ ತೇಜ
ಬೆಂದೊಡನಿಲಿದಿರಲ್ಲಿ ಕಮರಿತಲ್ಲ!
ಕಂದಮ್ಮನಳಲುರಿಯು ದಹಿಸಿತಲ್ಲ
ತಂದೆತಾಯ್ ಇವರಂತೆ
ಬಂಧುಗಳು ಇವರಂತೆ
ಬಂಧನವನೆಳೆತನಕೆ ಕಟ್ಟುತಿಹರು;
ಬಂಧನದಿ ಧರ್ಮವನೆ ಮೆಟ್ಟುತಿಹರು.

೫

ತಾರುಣ್ಯ! ನಿನೇತ
ಕೇರಿ ಬರುತಿಹೆಯಕಟ!
ಹೋರಾಡಿ ಫಲವಿಲ್ಲ ದೂರ ಹೋಗು;
ಏರಾಟ ತರವಲ್ಲ ನಾಗು ಹೋಗು
ಮಾರ! ನಿನ್ನಯ ಶರವ
ತೂರದಿರು ನನ್ನೆಡೆಗೆ
ನಾರಿತನವೇನಾರೆ ಬಯಸಬಹುದು;
ನಿನ್ನಿಂದ ನೊಂದೆದೆಯು ಅಲುಗಬಹುದು.

೬

ಮಸಣದಲಿ ಉರಿಯುತಿಹ
ಹೊಸಬಾಳ ಕಿಡಿಗಳಿರ!
ಹೊಸಹುಟ್ಟ ಹೆಣ್ಣೊಡಲೊಳಿರಿಸಬೇಡಿ,
ಕಸಕಿಂತ ಕಡೆಯಾಗಿ ಬಾಳಬೇಡಿ,
ಹನೆಗೆಟ್ಟು ಹೋಗಿಹುದು
ಹುಸಿಯಾಗಿ ಜೀವನವು
ಹೊಸನಡೆಯು ಹೊಸನುಡಿಯು ಬಾಳ್ವುದಿಲ್ಲ;
ಬೊಂದೊಡಲ ಬಿಸಿಯುಸಿರ ಕೇಳ್ವರಿಲ್ಲ.

# ಗೆಳೆಯಾ!

ಜಗದ ಬೇನೆಗಳೆಲ್ಲ ಗುಡಿಗಟ್ಟಿ ಬಂದರೂ
ಜಗ್ಗದಿಹ ಕುಗ್ಗದಿಹ ಮುಗ್ಗದಿಹ ಕಗ್ಗಲ್ಲ
ಕಲಿಗೆಳೆಯ! ಯಾವ ಮೋಸಲ ಬೇನೆ ನಿನ್ನ ಸಿರ
ಕಟ್ಟಿಸಿತೊ? ಯಾರ ದೃಷ್ಟಿಯು ದೋಷ ನಿನ್ನೊಡಲ
ಭೇದಿಸಿತೊ? ಮುಗಿಲ ಮೇಲ್ಬದಿಯಿಂದ ಸಿಡಿಲಿಳೆಗೆ
ಬಂದಂತೆ ನಿನ್ನ ಸಾವಿನ ಸಿಡಿಲು ನಿನ್ನ ಜನ
ದೆದೆಗಳಿಗೆ ಬರಸಿಡಿಲ ಹೊಯ್ತು ವಲೆ! ತುಂಬಿದೆದೆ
ಗಳ ಹಿಮವು ಕರಗಿ ಕಣ್ಣೀರಾಗಿ ಹರಿಯುತಿಹುದು.

ಎಲೆಲೆ ಜೀವದ ಗೆಳೆಯ! ನಿನ್ನ ನಗೆ ಮೊಗದ ಬಗೆ
ಗಡಲೊಳೀಸಾಡಿ ನಿಂತವರು ನೀ ಸತ್ತವನು
ಎಂದರೇಂ ನಂಬುವರೆ? ಸತ್ತರೂ ಸತ್ತಿಲ್ಲ
ವೆಲೆ ಗೆಳೆಯ! ಚಿತ್ತ ಭಿತ್ತಿಗಳಲ್ಲಿ ಬೇರ ಬಿ
ತ್ತಿಹೆ ನೀನು ನಿನ್ನನಗೆಮಲ್ಲಿಗೆಯು ಅರಳಿ ನಿಂ
ತಿರುವಾಗ ದೇವ ಮಲ್ಲಿಗೆಯಾಯ್ತು. ಬಿಡುಗಣ್ಣ
ಬಂಟರಿಗೆ ಆಶೆ ತಲೆದೋರಿದರೆ ಇಳೆಯು ನಂ
ಟರಿಂಗದುವೆ ಪಾಶವಲೆ! ಅವರ ಶಾಂತಿಯುಲಿಹುದು
ಜಗದ ಶಾಂತಿ- ನಿನ್ನಾತ್ಮ ಶಾಂತಿ! ಓ! ಗೆಳೆಯ!
ನಿನಗಿರಲಿ ಸವೆಯದಿಹ ಶಾಂತಿ. ಓಂ ಶಾಂತಿ
ಓಂ ಶಾಂತಿಃ ಶಾಂತಿಃ ಶಾಂತಿಃ ..

*

# ಜಗಂ ಝುಳ್ಳು! sss s....

೧

ಜಗಂ ಝುಳ್ಳು! ಜಗಂ ಝುಳ್ಳು!
ಹೊಡಿಯೊ ಡೊಳ್ಳು! ಝುಗಂ ಝುಳ್ಳು
ನೆಲದೆದೆಯನು ಬಿರಿಸುತ.
ಒಡಲು ಪೊಳ್ಳು! ಸೆಲವು ಜಳ್ಳು!
ಜಲವು ಸುಳ್ಳು! ಹೊಡಿಯೊ ಡೊಳ್ಳು!
ದುರಗಮ್ಮನ ನೆನೆಯುತ.

೨

ತಾಯಿ ರಥವನೇರಿ ಬಹಳು ಎಚ್ಚರೆಚ್ಚರೆಚ್ಚರ!
ಬಾಯಿ ಸತ್ತ ಮಾತಿದೇನು ಕೂಗು ಬಕುತರೆಲ್ಲರ
ಬರಲಿ ತಾಳ ಹೊಡೆಯುವವನು
ಕೊಂಬು ಕಾಳೆ ಹಿಡಿಯುವವನು
ತರಲಿ ಹೂವ ತಾಯ ಮುಡಿಗೆ ಧೂಪ ದೀಪ ಬೆಳಗಲಿ:
ಹೊಡಿಯೊ ಡೊಳ್ಳು! ಜಗಂ ಝುಳ್ಳು! ತಾಯಿ ಕಣ್ಣ ತೆರೆಯಲಿ.

೩

ಸಿಡಿಲ ಕಣ್ಣ ತೋರಬೇಡ ಸಿಡಿಲ ಮಾರಿ ನಮ್ಮ ತಾಯಿ
ಒಡಲ ನೆತ್ತರಿಲ್ಲವೆಂದು ಬಣ್ಣಧೂಳಿ ತೊರೆಯಬೇಡ
ಭಕ್ತರೊಡಲು ಬಿದ್ದರೇನು
ಶಕ್ತಿ ತಾಯಿ ಸಹಿಸಳೇನು?
ಸುಮ್ಮನೆತ್ತು ತಳಿಗೆಯನ್ನು ನಮ್ಮ ತಾಯಿ ಬದುಕಲಿ;
ಹೊಡಿಯೊ ಡೊಳ್ಳು! ಜಗಂ ಝುಳ್ಳು! ತಾಯಿ ಶಾಂತಳಾಗಲಿ.

೪

ನಿನ್ನ ಗಂಟಲೊಣಗಿತೆಂದು ತಾಯಿಗೆರೆಯಬೇಕು ನೀರು
ಕಣ್ಣನೀರ ಕಳ್ಳನೀರ ಬೆವರ ನೀರನೊಡೆಯ ನೀನು

ಮೂರು ನೀರ ಕೂಡಿಸು
ಮಾರಿಗೆಂದು ಊಡಿಸು
ತಣಿವ ತಂಪನೀವ ನಿನ್ನ ನೀರಿಡೆಸೆಯು ಸಲ್ಲಲಿ;
ಹೊಡಿಯೊ ಡೊಳ್ಳು! ಜಗಂ ಝುಳ್ಳು! ಮಾರಿ ಮುಸಣಿ ಗೆಲ್ಲಲಿ

೫

ನೀರಿನೆಡೆಯು ಸಂಧಿತೆಂದು ಹಿರಿದು ಹಲ್ಲ ಕಿರಿಯು ಬೇಡ
'ಹಾರ'ಕೆಂದು ಬಂದತಾಯಿಯೊಡಲಿಗೇನು ನಿನ್ನ ಬಹಣೆ
ತಾಯಿಯೊಡಲಿನಾಳ ಹಿರಿದು
ಬಾಯಿ ಮುಚ್ಚಿ ಕೂಳ ನೀಡು
ಹಸಿದ ಕರುಳು ಹಸಿಯು ತೊರೆದ ಕಳ್ಳ ಕಟಿಕು ಬಕುತ ನೀನು;
ಹೊಡಿಯೊ ಡೊಳ್ಳು! ಜಗಂ ಝುಳ್ಳು! ತಾಯು ಹಸಿವೆಗೆಂಬೆನು.

೬

ಕೂಳಿನೆಡೆಯು! ಕೂಳಿನೆಡೆಯು! ಅಯ್ಯೊ! ಕೂಳ! ಸಾವೆ ಎಲ್ಲಿ?
ಕೂಳಿಗೆಲ್ಲಿ ಸಾವು ಹೇಡಿ! ತಾಯಿ ಹಸಿದು ಬಂದಳಲ್ಲಿ
ಮಕ್ಕಳೆಡೆಯ ನೀಡು, ತಾಯಿ
ಮುಕ್ಕಿಬಿಡಲಿ ಜಗದ ಮಾಯಿ
ಎಳೆದು ಹಾಕು ಎಳೆಯ ಕಣ್ಣ, ತಾಯಿತಿಂದು ತೇಗಲಿ;
ಹೊಡಿಯೊ ಡೊಳ್ಳು! ಜಗಂ ಝುಳ್ಳು! ಮಾರಿ ಅಡ್ಡ ಹಾಯಲಿ.

೭

ನೆಲವ ಮೆಟ್ಟಿ ತಾಳ ಕುಟ್ಟಿ ಹೊಡಿಯೊ ಡೊಳ್ಳನೊಡಲು ಪೊಳ್ಳು!
ಕಿಲಿವ ಗೆಜ್ಜೆ ಉಲಿವ ಹೆಜ್ಜೆ ದುಂದುಮೆಯ್ಯ ತುಂಬುತಿರಲಿ
ಸತ್ತ ಮೇಲೆ ಸಾವು ನೋವೆ?
ನೆತ್ತರಿಡೆಯು ನಿಕ್ಕು ಬಂಟ!
ನಮ್ಮ ತಾಯಿ! ಮುಹಾ ಮಾರಿ! ನೆಕ್ಕಲಿಹಳು ಸಿದ್ಧಳು;
ಹೊಡಿಯೊ ಡೊಳ್ಳು! ಜಗಂ ಝುಳ್ಳು! ನಮ್ಮ ತಾಯಿಯೆದ್ದಳು.

೮

ಗಾನಲೋಲಳಾಗಿ ತಾಯಿ ನಾದಲೀಲೆಯಲ್ಲಿ ಮುಳುಗಿ
ತಾನ ಹಾಕುತಿರುವ ಕಾಲವೆಚ್ಚರೆಚ್ಚರೆಚ್ಚರ!
ರಥದ ಗಾಲಿ ನೂಕು ಮುಂದೆ
ಪಥವ ತೋರಿ ಸಿಲ್ಲು ಹಿಂದೆ
ಡೊಳ್ಳ ಹೊದಿಕೆಗೇನು ನೋವೆ? ಬಡಿವ ಡೊಳ್ಳು ಗುಡುಗುತಿರಲಿ
ಹೊಡಿಯೊ ಡೊಳ್ಳು! ಜಗಂ ಝುಳ್ಳು! ತಾಯ ರಥವು ತಡೆಯದಿರಲಿ.

೯

ಜಗಂ ಝುಳ್ಳು! ಝಗಂ ಝುಳ್ಳು!
ಹೊಡಿಯೊ ಡೊಳ್ಳು! ಜಗಂ ಜೊಳ್ಳು!
ನೆಲದೆದೆಯನು ಬಿರಿಸುತ;
ಒಡಲು ಪೊಳ್ಳು! ನೆಲವು ಜಳ್ಳು!
ಜಲವು ಸುಳ್ಳು! ಹೊಡಿಯೊ ಡೊಳ್ಳು!
ದುರಗಮ್ಮನ ನೆನೆಯುತ.

# ಬಡವನ ಬೇಡಿಕೆ.

೧

ಬೆವರಿನ ಹನಿಗಳ ಹೊನಲನು ಹರಿಸಿ
ದಣಿದೆನು ಮನವಾರಿ.
ಜೀವನ ಬವರದೊಳಿಲ್ಲಿದೆ ಮುಕುತಿ ?
ಕೆಣಕಿತು ಬಗೆ ಕಾರಿ.

೨

ನೇಸರು ಮುಳುಗುವ ಮುನ್ನವೆ ಜವದಿ
ಹೊರಟೆನು ದೇಗುಲಕೆ
ಸಾಸಿರ ಹೆಂಡಿರ ಹಿಂಡಿನ ದೊರೆಯು
ಹರಿಯನು ಕಾಣಲಿಕೆ

೩

ಕದಡಿತು ಭಾವನೆ ದೇವನ ಕಂಡು
ಬಾಯನು ಬಿಚ್ಚಿದೆನು.
ಅದುರಿತು ಅಧರವು ಬಕುತಿಯು ಸೂಸೆ
ಕಾಯದ ನೆನವಳಿದು.

೪

ಕಾಣದ ಕಡಲಿನ ತೆರೆಗಳ ಮೇಲೆ
ಬಿಕ್ಕುತೆ ಸಾಗಿರುವ
ಮಾನವರೆಂಬುವ ಹುಲುಜೀವಿಗಳ
ಒಡಲುರಿ ಬಟ್ಟಲವ.

೫

ಸವೆಯದ ಸಾವೋ ! ಸಾವಿನ ನೆನವೊ
ಏಳದ ಬಾಳುವೆಯೊ ?
ಕವಿದಿಹ ಕತ್ತಲೆ ಹರಿಯುವದೆಂದೋ
ಶಿವ ಶಿವ ನೀ ಹೇಳೊ !

೬

ಕಡೆಮೊದಲಳಿಸುವ ಸೊಡೆಯನು ಸವಿದು
ತಗ್ಗದ ತೋಷದೊಳು
ಬಡವರ ಬಗ್ಗರ ಒಡಲಿನ ಗೋಳು
ನುಗ್ಗದೆ? ಹೃದಯದೊಳು.

೭

ಮರುಕವ ಮರತೆಯ ಹೇ ಮಾದೇವ!
ಮಿಥ್ಯವೆ ನಿನ್ನೊಲವು.
ಕರೆದರೆ ಬರುವೆನು ಎಂದಿಹೆ ದೇವ
ಸತ್ಯದ ಬೆನ್ನಲವು.

೮

ಮುಕ್ತಿಯ ತೋರೋ ಕಾಣದು ಬಟ್ಟೆ
ನಿನ್ನಯ ಬಕುತರಿಗೆ
ಶಕ್ತಿಯ ನೀಡೋ ಕಜ್ಜವನೆಸಗಲು
ಚೆನ್ನನೆ ದಯದೋರು.

# ಚೆನ್ನಿ

೧

ನೆತ್ತರ ಹರಿಯುವ ಕಾಳಗವಮ್ಮಾ
ನಲ್ಲ ಹೋಗಿಹನ ।
ಕೊತ್ತುವೆನರಿಗಳನೊತ್ತುವೆನೆನ್ನುತ
ಬಿಲ್ಲ ಧರಿಸಿದನ ।
ಜೀವದ ಹಕ್ಕಿ ಜೀಯುವದಮ್ಮಾ
'ಮಲ್ಲ'ನ ಕಾಣದಲೆ ।
ಸಾವಿನ ಸಂಕಟವೇಳುವದಮ್ಮಾ
ನಲ್ಲನ ನೋಡದಲೆ ।
ಎಂತಹ ಚೆಂದ ಮನಸಿಜಗಂದ
ಸುಂದರ ನೋಡಮ್ಮಾ ।
ನಿಂತನೆಂದರೆ ಕಾಮನ ಬಿಂಬ—
ಕಳುಹಿದೆ ತಾಯಮ್ಮಾ ।
ನೆತ್ತರ ಬಣ್ಣದ ನೇಸರನಿದ್ದನು
ಬಾನಿನ ಬಯಲಿನೊಳು ।
ಎತ್ತಲು ಎತ್ತಲು ತಾರೆಗಳಿದ್ದವು
ಮಿನುಗುತ ಗಗನದೊಳು ।
ವಿಜಯಾದಶಮಿಯ ಕಹಳೆ ಕೂಗಿತು
ಬೀರರನೆಬ್ಬಿಸುತ ।
ವಿಜಯ ಧ್ವಜವದು ಮೆರೆಯುತಲಿತ್ತು
ಪಡೆಯೊಳು ಶೋಭಿಸುತ ।

೨

ಬಾರೇ! ಚೆನ್ನೀ! ಬೆಡಗಿನ ನನ್ನೀ!
ಬನ್ನಿಯ ಮುಡಿಯೋಣ ।

ತಾರೇ! ಹೊನ್ನಿ! ಸುರಿಗೆಯ ಕಣ್ಣೇ!
ಸೀಮೆಯ ದಾಟೋಣ!
ಕನ್ನಡ ನಾಡಿನ ಮನ್ನಣೆ ತುಳಿಯಲು
ಯವನರು ಬಂದಿಹರ।
ಕನ್ನಡ ಬಂಟರ ಕಬ್ಬಿಣಡೆಡಿಗಳ
ನವರೇ ಕೆಣಕಿಹರ।
ನಲ್ಲೆ! ನಮ್ಮನು ನುಂಗಲು ಬಂದಿಹ
ರಕ್ಕಸರಿವರನ್ನು।
ಅಲ್ಲಿಂದಲ್ಲಿಗೆ ಓಡಿಸದಿರುವೆನೆ
ಮುಕ್ಕಿವೆ ಹುಡಿಯನ್ನು।
ನೋಡಬಾರೆಲೆ ಕುರುಬರ ಕುವರಿ
ಕನ್ನಡ ಪಡೆಯನ್ನು।
ಕೇಳಲಾರೆಯ ಮೋಹರದಬ್ಬರ
ಮುತ್ತಿದೆ ಮುಗಿಲನ್ನು।

(ಓಟ)
ಇಷ್ಟು ಹೇಳಿ ತಾ ಸೆಟ್ಟನೆ ಹೊರಟನು
ಮಿಂಚಿನ ವೇಗದಲಿ
ತಟ್ಟನೆ ತಡೆದೆನು ಪೋಗದಿರೆಂದೆನು
ಹೆಚ್ಚಿದ ಪ್ರೇಮದಲಿ.

೩

ಗಂಡನು ಶೌರ್ಯವ ತೋರುವನೆಂದು
ಹಿಗ್ಗಲೆ ನಾನಿಂದು।
ಕೆಂಡದ ಕುಣಿಯಲಿ ಬೀಳುವನೆಂದು
ಕುಗ್ಗಲೆ ನಾನಿಂದು।
"ಕುರುಬರ ಬಂಟಾ ಗೆಲ್ಲೊ" ಎಂದು.
ಹರಸಲೆ ನಾನಿನ್ನು।
ಹರಹರ! ಎನ್ನುತ ಮಡಿದಾನೆಂದು
ತಡೆಯಲೆ ಸಾವನ್ನು।

ನಾಡಿಗೆ ನಾಡೇ ಸಿಡಿದೆದ್ದಿರಲು
ಮಡದಿಗೆ ಸೋತಿಹನು।
ಎನ್ನುವ ಮಾತಿಗೆ ಈಡುಮಾಡಲಾ
ಪ್ರೇಮದ ಮೂರ್ತಿಯನು।
ನಾಡಿನ ಕಜ್ಜವ ತಡೆಯುವದೆಂದರೆ
ನರಕದಲಿಳಿದಂತೆ।
ಯುದ್ಧಕೆ 'ಮಲ್ಲ'ನ ಕಳಹುವದೆಂದರೆ
ಜೀವವೆ ಸಿಡಿದಂತೆ।
ಬವರಕೆ ಕಳುಹಿಸಿ ಗಂಡನ ಕೊಲುವುದು
ಗರತಿಗೆ ವಿಷದಂತೆ।
ಪ್ರೇಮದಿ ಬಂಧಿಸಿ ಮನೆಯೊಳಗಿಟ್ಟರೆ
ಹೇಡಿಯೆನುವರಂತೆ।
ಗಂಡನ ಕೊಲ್ಲುವ ಗರತಿಯರುಂಟೆ?
ಕಾಳಗ ಬೇಡಮ್ಮ!
ಹೇಡಿಗೆ ಹಾರವ ಹಾಕಿದುದುಂಟೆ?
ಕನ್ನಡ ಹೆಣ್ಣಮ್ಮ।

೪

ವೇಳೆ ಬಂದಿತಮ್ಮ। ಪರಿಕಿಪ
ಸಮಯ ಬಂದಿತಮ್ಮ।
ಕಾಳಿ! ಕಾಯೆಯಮ್ಮ। ಗಂಡನ
ಹರಣ ನಿನ್ನದಮ್ಮ।
ಗಂಡನ ಕಳುಹಿಸಿ ಮುಂಡೆಯಾಗಲೆ।
ಬಂಧಿಸಿ ನಾಡಿಗೆ ದ್ರೋಹಿಯಾಗಲೆ।
ಕನ್ನಡ ರಾಣಿಯರರಿದು ನಿಲ್ಲಲೆ।
ಮನ್ನಣೆ ಕವಚವ ಬಿಸುಟೆ ಬದುಕಲೆ।
ಏನು ಮಾಡಲಮ್ಮ। ಯಾವುದು
ತಿಳಿಯದಾಯಿತಮ್ಮ।

ಎನಿತು ನುಡಿದೆನಮ್ಮ! 'ಮಲ್ಲ'ನು
ಕೇಳದಾದನಮ್ಮ।
ಸಲ್ಲಸಳುಕಲಿಲ್ಲ। ಪ್ರೇಮಕೆ
ಸೋತು ನಿಲ್ಲಲಿಲ್ಲ।
ಗಲ್ಲ ಹಿಡಿವನಲ್ಲ। ಚುಂಬಿಸಿ
ರಣಕೆ ನಡೆದನಲ್ಲ।
"ಮಡದಿಯ ಪ್ರೇಮವು ಹೃದಯದಲಿ।
ನಾಡಿನ ಪ್ರೇಮವು ಕಾರ್ಯದಲಿ।
ಹೆಣ್ಣೆ ಬರುವೆನು ಚಿಂತಿಸದಿರು ನೀ।
ವಾರವೆರಡರಲ್ಲಿ.
ಚೆನ್ನೇ! ಬರುವೆನು ಮಿಂಚಿನ ವೇಗದಿ
ನಲುಮೆಯರಕೆಗಳಲಿ.

೫

ಮೂರು ತಿಂಗಳಮ್ಮ। 'ಮಲ್ಲ'ನ
ಸುಳಿವು ತಿಳಿಯದಮ್ಮ।
ಎಲ್ಲಿಯರಸಲಮ್ಮ। ನಲ್ಲನ
ಪ್ರೇಮವಚ್ಚರಮ್ಮ।
ಹೊಟ್ಟೆ ಹಸಿಯದಮ್ಮ। ನಲ್ಲನ
ಬಿಟ್ಟು ಬಾಳೆನಮ್ಮ।
ಕನಸು ಕೆಟ್ಟದಮ್ಮ। ನಿನ್ನೆಯೆ
ಕನಸು ಕಂಡೆನಮ್ಮ।
ಮನಕೆ ಭೀತಿಯಮ್ಮ। ತಾಳೆನು
ನೆನಹದಳಿಯದಮ್ಮ।
ರಣದಂಗಣದಲಿ ವೀರಾವೇಶದಿ
ಕಾದುತ ಕೊಚ್ಚುತ ರುಂಡಮುಂಡಗಳ
ನೆತ್ತರ ಹೊಂಡದಿ ಚಂಡಾಡುತಲಿರೆ
ಸೋತು ಸಿಡಿದನೇನೆ?। ವೀರನ

ಮಾತು ಮುಗಿಯಿತೇನೆ?।
ಧಾರಾತೀರ್ಥದ ರಕ್ತದ ಮಡುವೊಳು
ನೆತ್ತರ ನೀರಿನ ಕಾಳ್ಸುರದಿ
ಕೊತ್ತಿದ ಕತ್ತಿಗೆ ನೆತ್ತರ ಹತ್ತಿ
ಒಂದೇ ಸವನೆ ಬಸಿ ಬಸಿಯುತ್ತಿರೆ
ನೆತ್ತರ! ನೆತ್ತರ! ನೆತ್ತರವೆಂದು
ಕೂಗುವ ನರಿಗಳು ಮರುಳುಗಳೆಲ್ಲಾ
ನಲ್ಲನ ಮುತ್ತಿಹವೆ?। ಅಮ್ಮಾ!
ಮಲ್ಲನ ತಿಂದಿಹವೆ?।

ಕೂಗೆಲೆ ಕೋಗಿಲೆಯುಣಕಿಸುತ।
ಗಂಡನ ಕೊಂದವಳಿವಳೆನುತ।
ಮಧುರ ಕಂಠದಾ ವರವುಟ್ಟ।
ಕೋಕಿಲೆಯೆಂಬರೆ ಬಲುದುಷ್ಟ।
ಹಾರಿ ಬಂದೆಯಲ್ಲೇ। ಗೊರವಿ
ನಲ್ಲನಿರುವನೇನೆ।
ನೆಗೆದು ಬರುವಿಯಲ್ಲೆ। ಹರಿಣಿ
'ಮಲ್ಲ' ಬಂದನೇನೆ?।
ತರುವೆ! ವೃಕ್ಷವೇ! ಗಾಳಿಯೆ! ಹೊಳೆಯೆ!
ಎಲ್ಲಿಯಾದರೂ ನಲ್ಲನ ಬಚ್ಚಿಹಿರಾ?।
ಪರಿಪರಿ ಬೇಡುವೆ ಕುಂಕುಮ ಕಾಯಿರಿ
ಕಟ್ಟಿದ ತಾಳಿಯು ಕಾಯಿರೆಲಾ.

ಏನು ಮಾಡಲೆಮ್ಮ। ಗಂಡನ
ತಾಣವರಿಯೆನಮ್ಮ।
ಯಾರ ಕಳುಹಲೆಮ್ಮ। ನಲ್ಲನ
ಯಾರು ತರುವರಮ್ಮ।
ಹುಚ್ಚು ಹಿಡಿಯಿತಮ್ಮ। ನಲ್ಲನ

ಮೆಚ್ಚು ಮಾಟವಮ್ಮ।
ಕೆಚ್ಚು ಕಡಿಯಿತಮ್ಮ। ಹೃದಯದ
ಕಿಚ್ಚು ಹರಡಿತಮ್ಮ।
ಬದುಕು ಚೆಂದವೇನೆ। ಈ ಪರಿ
ಬಾಳು ಬೆಳೆವುದೇನೆ
ಒಂದು ಜೀವವಮ್ಮ। ನೆಚ್ಚಿಲಿ
ಹೊಂದಿಕೊಂಡೆವಮ್ಮ।
ಜಗದಿ ಬಾಳಬಹುದೆ। ನಲ್ಲನ
ತೆಗೆದು ತಾಳಬಹುದೆ।
ಹೋಗಿ ಬರುವೆನಮ್ಮ। ಮಲ್ಲನ
ಕೂಡಿ ಕೊಳ್ವೆನಮ್ಮ।

೬

ಕಾಳಗ ಕಣದಲಿಯುಬ್ಬರವೇನಿದು
ಸೈನ್ಯ ಹರಿವುದೇಕೆ ?।
ತೋಳಕೆ ಬೆಚ್ಚಿದ ಹರಿಣಗಳಂದದಿ
ಮೋಹರ ಓಡುತಿದೆ.
ಹೆಣ್ಣಿನ ರೂಪ! ಕರದಲಿ ಕತ್ತಿ!
ತಿರ್‍ರನೆ ತಿರುವುತ
ಸರ್‍ರನೆ ಸವರುತ
ರುಂಡವ ವೈರಿನ
ಚೆಂಡಿನ ತೆರದಲಿ
ಹೆಣಗಳ ಹಿಂಡಿಗೆ
ಹಿಂಡನೆಯುರುಳಿಸಿ
ಕಡಿದೂ! ಕಡಿದೂ
ತೇಗೀ! ತೇಗೀ!
ರ ಹೊಳೆಯಲಿ ಸಾಗಿಹುದು
ತಾಂಡವ ನೃತ್ಯವನೆಸಗಿಹುದು.

ಎಂಥ ರೂಪವಿದು! ಏನು ಭಯಂಕರ
ಚಂಡಿಯೊ ? ಮಹಾ
ಮುಂಡೇಶ್ವರಿಯೊ!
ರುಂಡ ಮಾಲೆಗಳು ಶೋಭಿಸುತಿಹವು
ಕೆಂಡದ ಕಂಗಳು ಕಿಡಿಸುತ್ತಿಹವು.
ನರಗಳ ಹಾರವು ಕೊರಳಲ್ಲಿ!
ಎಲುವಿನ ದಂಡವು ಕರದಲ್ಲಿ!
ಗುಡುಗಿನ ದನಿಯುಲಿ ನುಡಿಯುವಳೇನಿದು
ಮುಗಿಲ ಮೀಟುವಂತೆ।
ಸಿಡಗಿನ ದನಿಯೊ! ಗುಡುಗಿನ ದನಿಯೋ
ನಡುಗಿತು ಬಯಲಂತೆ।
ಕನ್ನಡ—ಕನ್ನಡ—ಕನ್ನಡ— ದೇವಿ!
ಕನ್ನಡ ಕಡುಗಲಿ ಮಲ್ಲನ ದೇವಿ!
ಗಂಟಲು ಒಣಗಿದೆ ನೆತ್ತರು ಬೇಕು।
ಮಲ್ಲನ ಕೆಡಹಿದ ಖೂಳನೆ ಬೇಕು।
ಕನ್ನಡ ಹೆಂಗಳ ಸವಿನೋಡಿ।
ನೆತ್ತರ ಕಾಲುವೆ ಹರಿದಾಡಿ।"
ಏನದು ಸಪ್ಪಳ ಗಗನದಲಿ।
ಮಲ್ಲನ ದನಿಯದು ಬಾನಿನಲಿ।
"ಚೆನ್ನಿಯೆ ನೀನೇ ರಾಣಿ ಕಣಾ।
ಮಲ್ಲನ ಹೆಂಡತಿ ನಿಜವು ಕಣಾ।
ಬೇಗದಿ ಬಾರೇ ಬಿನ್ನಾಣಿ।
ಪ್ರೇಮದ ಮೂರುತಿ ನನ್ನಾಣಿ।"

೭

ಕಾಣುವೆದೇನಿದು ? ಎಂತಹ ನೋಟ!
ಭೀಕರವಾಗಿಹ ರಣದೃಶ್ಯ!

ರುಂಡಮುಂಡಗಳ
ನೆಲ್ಲ ಚೆಂಡುಗಳ
ಕೊಯ್ದಳು ಚೆನ್ನಿಯು ರೊಚ್ಚಿನಲಿ
ಮಲ್ಲನ ಸೇಡಿನ ಹುಚ್ಚಿನಲಿ

೮

ಏನಿದು ಸಪ್ಪಳ! ಬಂಗಲಿನಲಿ।
ಸಿಡಿಲದೊ ಬಂದಿತು ಧರಣಿಯಲಿ।
ತುಬಾಕಿ ಹಾರಿತು ಹುರಿದಾಡಿ
ಚೆನ್ನಿಯು ಬಿದ್ದಳು ಉರಿಯಾಡಿ
ಕನ್ನಡ ನಾಡಿನ ಕೈವಾರಿ
ರಣದಲಿ ಮಡಿದಳು ನ್ರೈತೂರಿ

ಮಡಿದಳೆನ್ನಬೇಕೋ?। ಚನ್ನಿಯು
ಉಳಿದಳೆನ್ನಬೇಕೊ!।

## ಗೋಳು

ಹೆಣ್ಣು ಬಾಳಿನ ಕಹಿಯು
ನಂಜೇರಿದವಳು.
ಪೆಣ್ಣೊಡಲ ಪರಿತಾಪ-
ದಿಂದ ಬೆಂದವಳು;

ಬಾಳುದಯ ಕಾಣುತಲೆ
ಬದುಕಳಿದು ಹೋಯ್ತು;
ಕಾಲನುರುದಾಡೆಯಲಿ
ಸೊಗ ಸಿಡಿದು ಬಿತ್ತು.
ಗೋಳು ಗೋಳಿಲಿ ಗೋಳು
ಗೋಳಿನ್ನ ಬಾಳು;
ಹೋಳು ಹೋಳಾಯಿತೆಲಿ
ಸಿಡಿದೆನ್ನ ಬಾಳು.

ಆವ ಕವಿ ಬಣ್ಣಿಪನೊ
ಎನ್ನಳಲ ಝಳವ;
ಯಾವ ಕಲೆ ಚಿತ್ರಿಪುದೊ
ಬೆಂದೊಡಲ ತನುವ.
ಯಾರ ಮಾನಸದಳಲು
ಸೂಸುರುವದೊ ಇಂದು;
ಯಾರ ಕರುಳಿನ ರಸವು
ಹೊಮ್ಮುವದೊ ಮಿಂದು.
ಯಾರೆನ್ನ ಗತಿಗೆಟ್ಟ
ದೇಹವನು ಕಂಡು
ಮರುಗುವರೊ ಅವರೆನ್ನ
ಸಹಜಾತರಿಂದು.

ಅವರಿದ್ದರು ತೋರುವೆನು
ನಾ ಬೆಂದ ಪರಿಯ
ಎದೆಯೊಡೆದು ಬರುತಿರುವ
ಭಾವನೆಯ ತೋರಿಸು
ಹೆಣ್ಣು ಬಾಳಿನ ಸವಿಯು
ನಲ್ಲನೊಡಗೂಡಿ
ಆ ಸವಿಯು ನೊಡೆಯೆಲ್ಲಿ ?
— ಆ ಗೋರಿಯಲ್ಲಿ
ಯಾರ ಜೀವಸಕಿನಿದು
ನೊದೆಯಾದೆನೊಮ್ಮೆ
ಯಾರ ಬಾಳಿನ ಬೆಳೆಗೆ
ಕಳೆಯಾದೆನೊಮ್ಮೆ
ಯಾರ ವಂಶದ ಸಸಿಗೆ
ಹಸಿಯಾದೆನೊಮ್ಮೆ
ಯಾರ ಸಂತಸ ಸೆಲೆಯು
ನೆಲೆಯಾದೆನೊಮ್ಮೆ
ಅಯ್ಯಯ್ಯೋ ! ಅವರೆಲ್ಲಿ ?
— ಸುಡುಗಾಡಿನಲ್ಲಿ;
ಭೂದೇವಿ ಮಡಲಲ್ಲಿ
ಮಲಗಿರ್ಪರಲ್ಲಿ;
ಅವರೊಡನೆ ನಾನೆಷ್ಟು
ಸವಿಗನಸ ಹೆಣೆದೆ
ಭವಿತವ್ಯವರಿಯದಲೆ
ಸಂಭ್ರಮದಿ ಕುಣಿದೆ.
ಸಿಂಗರದ ಹೊಳಪೇನು
ಬಿನ್ನಾಣವೇನು

ಭಂಗಬಾರದ ತೋಷ
ಚೆಲ್ಲಾಟವೇನು
ಯಾರೊಡನೆ ಇನ್ನು ಮೇ-
ಲಾರೊಡನೆ ನಾನು
ಆ ಸುಖವ ಪಡೆವೆನಲೆ!
ಬಹು ಪಾಪಿ ನಾನು.
ಯಾರ ತೋಷಿಸಲೆಂದು
ವೀಣೆ ಬಾಜಿಸಲಿ ?
ಗೀತಗಳ ನುಡಿದಾರ
ಮನವ ರಮ್ಮಿಸಲಿ ?
ಯಾರೆನ್ನ ಸಂತಯಿಸಿ
ಮುಂದೆ ಕರೆವವರು ?
ಯಾರೆನ್ನ ಮುಂಗುರುಳ
ತೀಡಿ ರಮಿಸುವರು ?
ಆನಂದ ಬಡುತಿರುವ
ಸಾನಂದ ಯುಗ್ಮಗಳ
ಏನೆಂದು ಬಿಡಿಸುವೆಯೊ
ಹೇ ದೇವ! ದೇವ!
ಆನಂದಮಯಸಂತೆ
ನೀ ದೇವ! ದೇವ!

# ನವಭಾರತದರುಣೋದಯ

೧

ಹೊಸಗಾಲದ ಹೊಸಹುಕ್ಕಳ ಬಿಸಿನೆತ್ತರು ಸೂಸಿ।
ಬಾನೆಲ್ಲಾ ಬೀಸಿ।
ರಾಷ್ಟ್ರೋದಯ ವರುಣೋದಯ ಸೂರ್ಯೋದಯವಾಗಿ।
ದಾಸ್ಯತ್ವದ ಸೀಗಿ।
ನವಭಾರತದರುಣೋದಯವಾಗುತಲಿಹುದೇಳಿ।
ಬಿಡುಗಡೆಯನು ಕೇಳಿ।

ಆ ತವಸಿಯ ಪುಣ್ಯದ ತಂತ್ರ।
ನವಶಾಂತಿಯ ಬೀಜದ ಮಂತ್ರ।

ಬಾನೇರಿತು ಭಾರತದೊಳು ಭರತಾತ್ಮನ ಕೀರ್ತಿ।
ಸ್ವಾತಂತ್ರ್ಯದ ಮೂರ್ತಿ॥

೨

ಎಂದೆಂದಿಗು ಒಂದಾಗಿಹ ಭಾರತ ನಾಡಿಂದ।
ಹೋಳಾಯಿತು ಎಂದು।
ನೆರೆನೊಂದವರಿಂದಿಲ್ಲಿಯೆ ನಡೆನೋಡಲಿ ಮುಂದು।
ಭಾರತವೇ ಒಂದು।
ಬಿಡುಗಡೆಯೊಳು ಸಿಡಿದೆದೆಗಳನೊಡಗೂಡಿಪ ಕಾಂತಿ।
ಮೈಗೂಡಲು ಶಾಂತಿ।

ಭಾರತ ನವಯುಗದಾದೇಶ।
ಭಾರತ ಶಾಂತಿಯ ಸಂದೇಶ।

ಜಗ ಕಾಣುತ ತಿಳಿಬೆಳಕೊಳು ಪಡೆಪಡೆವುದು ಶಾಂತಿ।
ಭಾರತದೀ ಶಾಂತಿ॥

೩

ಇದು ತಪಸಿಯ ಮಹಾತ್ಮನ ಜಗಮೋಹನ ಮಂತ್ರ!
ಭಾರತದೀ ತಂತ್ರ।
ಇದು ತ್ಯಾಗದಿ ಬಲಿದಾನದಿ ಬಲಗೊಂಡಿಹ ಶಕ್ತಿ।
ದೊರೆಕೊಂಡಿಹ ಮುಕ್ತಿ।
ನವಯುಗದೊಳು ನವಶಾಂತಿಯ ನವಕಾಂತಿಯ ಬೀಜ।
ಆಧ್ಯಾತ್ಮಿಕ ತೇಜ।

ಶಾಂತಿ ಸಮರಕಿದು ಜಯಭೇರಿ।
ವಿಶ್ವಶಾಂತಿಗಿದು ಹೊಸದಾರಿ।

ಬುವಿಯಂಗಳ ಬಾನಂಗಳ ನೆರೆ ತೀವಿತು ನೋಡು।
ಸ್ವಾತಂತ್ರ್ಯದ ಹಾಡು।

೪

ಜಯ ಭಾರತ! ಜಯ ಭಾರತ! ಜಯ ಭಾರತವೆಂದು।
ಜಯಗೀತವ ಹಾಡು।
ಜಯ ಗಾಂಧಿಗೆ! ನೇತಾಜಿಗೆ! ಭರತಾತ್ಮರಿಗೆಂದು।
ಜಯವಂದನೆ ಮಾಡು।
ಬಾನಂಚೊಳು ನೆರೆಮಿಂಚಿದೆ ಜಯಬಾವುಟವಿಂದು।
ಶಿರಬಾಗುತ ನೋಡು।

ನವಭಾರತದರುಣೋದಯ।
ವಿಂದಾಗಿದೆ ಸೂರ್ಯೋದಯ।

ಜಯ ಭಾರತ! ಜಯ ಭಾರತ! ಜಯ ಭಾರತವೆಂದು।
ಭಾರತ ನಾಡೊಂದು ||

# ಅರುಣೋದಯ.

ಪುಣ್ಯಪ್ರದಾಯಕಂ ಆಗೆನಿತು ಕಂಗೊಳಿಪು
ದರುಣೋದಯಂ! ಚೆಲುವೆಯೀನೆಲದವಳು, ನೇಸ
ರಾಗಮನದುಬ್ಬಿನಿಂ, ಪಕ್ಷಿಗಳ ಗಡಣದಿಂ
ದೊಡಗೂಡಿ, ಆರತಿಯ ಗೀತಗಳ ಪೇಳ್ವಂತೆ
ಮೆಲ್ಲುಲಿಯ ಸರವೆನಿತು ಕಿವಿಗಿನದ ಬೀರುವದು!
ವಿಶ್ವವನೆ ಸೌಂದರ್ಯದೊಳಗದ್ದಿತೆಗೆದೊಲಿಪೆ

ಇಂದೆನ್ನ ಮನವಕ್ಕಿ
ಯಾವುದೋ ಭಾವದಿಂದೊಲವಿನಿಂ ಕುಣಿಯುತಿದೆ.
ಎದೆಯೊಲವು ತುಂಬಿಬರೆ ಪ್ರೇಮವಾಹಿನಿಯೆಲ್ಲ
ದೇಹದಲಿ ಹರಿಯುವದು; ಒಳದೋಟ ಬೆಳಗುವದು.